# ಮೂರು ದೈವ ಗ್ರಂಥಗಳು
# ಮೂರು ಪ್ರಥಮ ವಾಕ್ಯಗಳು




– ಧರ್ಮಗಳು




– ಆತ್ಮಗಳು




– ಪ್ರಾರ್ಥನೆಗಳು

Author :
The Only Guru of Three Religions
The Spiritual Emperor, Thraitha Theorem Originator
**Sri Acharya Prabodhananda Yogeeshwarulu**

**www.thraithashakam.org**





# ಮೂರು ದೈವ ಗ್ರಂಥಗಳು
# ಮೂರು ಪ್ರಥಮ ವಾಕ್ಯಗಳು


<u>ಗ್ರಂಥಕರ್ತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜನವರಿ–2017

ಪ್ರತಿಗಳು : 1000 **ಬೆಲೆ. 60/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣೆ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ - ದೋಬೂಚುಲಾಟ.
111. ಪ್ರಜಲು - ಮಾನವುಲು.
112. ಆಸ್ತಿ - ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು-ಬೆದುರು
118. ಶವಮು - ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು

ಮೂರು ದೈವ ಗ್ರಂಥಗಳು ಯಾವುವೊ ಬಹಳ ಜನರಿಗೆ ತಿಳಿದಿರುವುದಿಲ್ಲ. ಕೆಲವರು ಅವುಗಳ ಹೆಸರು ಕೂಡಾ ಕೇಳಿರುವುದಿಲ್ಲ. ಬಹಳ ಜನರಿಗೆ 'ದೈವಗ್ರಂಥ' ಎಂದರೆ ಅರ್ಥ ಕೂಡಾ ತಿಳಿದಿಲ್ಲ. ಒಬ್ಬ ಇಸ್ಲಾಮ್‌ನನ್ನು ಅನುಸರಿಸುವ ಮುಸ್ಲಿಮ್‌ರು ಮಾತ್ರ ತಮ್ಮ ಗ್ರಂಥವನ್ನು ದೈವಗ್ರಂಥವೆಂದು ಹೇಳಿಕೊಳ್ಳುತ್ತಿರುತ್ತಾರೆ. ಆದರೆ ಅವರು ಕೂಡಾ ರೂಢಿಪದದಂತೆ ತಮ್ಮ ಗ್ರಂಥವನ್ನು 'ಅಂತಿಮ ದೈವಗ್ರಂಥ' ಎಂದು ಕರೆಯುತ್ತಿದ್ದಾರೆ ಹೊರತು, ಅದು ಹೇಗೆ ದೈವ ಗ್ರಂಥವಾಗಿದೆಯೊ? ಹೇಗೆ ಅಂತಿಮ ಗ್ರಂಥವಾಗಿದೆಯೊ? ಅವರಿಗೇ ತಿಳಿದಿಲ್ಲ. ನಮಗೆ ತಿಳಿದಿದೆ ಎನ್ನುವವರಿದ್ದರೂ ಅವರಿಗೆ ತಿಳಿದಿರುವುದು ಕೂಡಾ ಸತ್ಯವಿರುವುದಿಲ್ಲ. ಈದಿನ ಮೂರು ಮತದವರು ಮೂರು ಗ್ರಂಥಗಳನ್ನು ಹೊಂದಿದ್ದಾರೆ. ಕ್ರೈಸ್ಥರು ತಮ್ಮ ಗ್ರಂಥ ಬೈಬಲ್ ಎಂದು ಧೈರ್ಯವಾಗಿ ಹೇಳಿಕೊಳ್ಳುತ್ತಿದ್ದಾರೆ. ಹಾಗೆ ಮುಸ್ಲಿಮ್‌ರು ತಮ್ಮ ಗ್ರಂಥ ಖುರಾನ್ ಗ್ರಂಥವೆಂದು ಸಂತೋಷವಾಗಿ ಹೇಳಿಕೊಳ್ಳುತ್ತಿದ್ದಾರೆ. ಹಿಂದೂಗಳ ವಿಷಯಕ್ಕೆ ಬಂದರೆ ತಮ್ಮ ಗ್ರಂಥ ಭಗವದ್ಗೀತೆಯೆಂದು ಹೇಳಲಾರದೆಹೋಗುತ್ತಿದ್ದಾರೆ. ಕೆಲವರು ಹಿಂದೂಗಳು ತಮ್ಮವು ವೇದಗಳೆಂದು ಹೇಳುತ್ತಿದ್ದಾರೆ. ಕೆಲವರು ವೇದಗಳೋ, ಭಗವದ್ಗೀತೆಯೋ ಏನೂ ತಿಳಿಯದ ಸ್ಥಿತಿಯಲ್ಲಿ 'ನಮಗೆ ಗೊತ್ತಿಲ್ಲ' ಎಂದು ಹೇಳುತ್ತಿದ್ದಾರೆ. ಏನು ತಿಳಿಯದವರು ಬಹಳಜನ ಇರುವಾಗ, ವೇದಗಳು ಎಂದು ಹೇಳುವವರು ಕೆಲವರಿರುವಾಗ, ಅವರಲ್ಲಿ ಹತ್ತರಷ್ಟು ಮಾತ್ರವೇ ನಮ್ಮದು ಭಗವದ್ಗೀತೆಯೆಂದು ಹೇಳುವವರು ಇದ್ದಾರೆ.

ಹಿಂದೂಗಳು ತಮ್ಮ ಗ್ರಂಥ ವಿಷಯದಲ್ಲಿಯೇ ಅಲ್ಲದೆ, ದೇವರ ವಿಷಯದಲ್ಲಿ ಕೂಡಾ ಇಂಥವನು ದೇವರು ಎಂದು ಹೇಳಲಾರದೆಹೋಗುತ್ತಿದ್ದಾರೆ. ಉಳಿದ ಎರಡು ಮತದವರು ಹಿಂದೂಗಳಿಗಿಂತ ಹಿಂದೆ ಹುಟ್ಟದವರಾದರೂ, ಹಿಂದೂಗಳಿಗಿಂತ ಅವರೇ ಸ್ವಲ್ಪ ಮೇಲೆನ್ನುವಂತಿದ್ದಾರೆ. ಉಳಿದ ಎರಡು ಮತದವರು ನಮ್ಮದು ಇಂತಹ ಗ್ರಂಥವೆಂದು ಧೈರ್ಯವಾಗಿ ಹೇಳಿಕೊಳ್ಳುತ್ತಿದ್ದಾರೆ. ಹಾಗೇ ನಮ್ಮ ದೇವರು ಇಂತಹವನೆಂದು ಒಬ್ಬನ ಹೆಸರನ್ನೇ ಹೇಳುತ್ತಿದ್ದಾರೆ.

ಹಿಂದೂಗಳು ಹಾಗೆ ಒಬ್ಬ ದೇವರ ಹೆಸರು ಹೇಳದೆ ಹೋಗುವುದಲ್ಲದೆ ಕೆಲವರು ಒಂದು ದೇವತೆಯನ್ನು, ಮತ್ತೆ ಕೆಲವರು ಇನ್ನೊಂದು ದೇವತೆಯನ್ನು ಕುರಿತು ಹೇಳುತ್ತಿದ್ದಾರೆ. ಹಿಂದೂಗಳ ಭಾವನೆಯಲ್ಲಿ ಒಬ್ಬ ದೇವರೆನ್ನುವ ದೃಷ್ಠಿಯೇ ಇಲ್ಲ. ಇಷ್ಟದೇವತಾರಾಧನೆ ಎಂದು ಹೆಸರೇ ಇಟ್ಟುಕೊಂಡಿದ್ದಾರೆ. ಇದನ್ನು ಅನುಸರಿಸಿ ನೋಡಿದರೆ ಯಾರ ಇಷ್ಟವನ್ನು ಅನುಸರಿಸಿ ಅವರು ದೇವತೆಗಳನ್ನು ಸೃಷ್ಠಿಸಿಕೊಂಡಿದ್ದಾರೆಂದು ತಿಳಿಯುತ್ತಿದೆ. ಹೀಗೆ ಇರುವುದರಿಂದ ಹಿಂದೂಗಳಿಗೆ ಒಬ್ಬ ದೇವರಂತೂ ಯಾರೂ ಇಲ್ಲವೆಂದು ಹೇಳಬಹುದು. ಯಾರಾದರೂ ಜ್ಞಾನವನ್ನು ತಿಳಿದು ಎಲ್ಲರಿಗೂ ಒಬ್ಬನೇ ದೇವರೆಂದು ಹೇಳಿದರೆ ಅವನನ್ನು ಹಿಂದೂವೇ ಅಲ್ಲ. ಅನೇಕ ದೇವತಾರಾಧನೆ ಇರುವುದೇ ಹಿಂದೂತ್ವ ಎಂದು ಹೇಳುತ್ತಿದ್ದಾರೆ. ಒಂದೇ ದೇವರ ಆರಾಧನೆ ಮಾಡುವವನ್ನು, ಎಲ್ಲರಿಗೂ ಒಬ್ಬನೇ ದೇವರೆಂದು ಹೇಳುವವನನ್ನು ಹಿಂದೂಗಳಿಂದ ಹೊರಹಾಕಿ, ಅವನನ್ನು ಪರಮತಸ್ಥನೆಂದು ಹೇಳುತ್ತಾರೆ. ಬಹುದೇವತಾರಾಧನೆ ಅಜ್ಞಾನವೆಂದು ಅವರಿಗೆ ತಿಳಿಯದೆಂದು, ಒಟ್ಟಾರೆ ಆತ್ಮಜ್ಞಾನವಾದರೂ, ದೈವಜ್ಞಾನವಾದರೂ ಯಾವುದು ತಿಳಿದಿಲ್ಲ ಎಂದು ಹೇಳಬಹುದು.

ಭೂಮಿಮೇಲೆ ಒಟ್ಟು 12 ಮತಗಳಿರುವಾಗ ಅದರಲ್ಲಿ ಮುಖ್ಯವಾದವು ಮೂರು ಮತಗಳಾಗಿ ಗುರುತಿಸಿದ್ದೇವೆ. ಮೂರು ಮತಗಳಲ್ಲಿ ದೇವರು ಹೇಳಿದ ಬೋಧನೆ ಇರುವ ಮೂರು ಗ್ರಂಥಗಳು ಇವೆ. ಆದ್ದರಿಂದ ಮೂರು ಮತಗಳನ್ನು ಮುಖ್ಯವಾಗಿ ಲೆಕ್ಕಿಸಿದ್ದೇವೆ. ಉಳಿದ ಒಂಭತ್ತು ಮತಗಳಲ್ಲಿ ಮನುಷ್ಯರು ಹೇಳಿದ ಬೋಧನೆ ಇದೆ ಆದರೆ, ದೇವರು ಹೇಳಿದ ಬೋಧನೆ ಇಲ್ಲ. ದೇವರ ಬೋಧನೆ ಇರುವುದನ್ನನುಸರಿಸಿ ಮೂರು ಮತಗಳು ಗುರುತಿಸುವಂತಹುಗಳಾಗಿವೆ. ಮೂರು ಮತಗಳು ದೇವರು ಹೇಳಿದ ಬೋಧನೆಯನ್ನು ಆಧಾರವಾಗಿ ಮಾಡಿಕೊಂಡು ತಯಾರಾದವುಗಳೇ, ಆದರೂ ದೇವರ ಬೋಧನೆಯನ್ನು ಅರ್ಥಮಾಡಿಕೊಳ್ಳುವು ದರಲ್ಲಿ ವ್ಯತ್ಯಾಸ ಇರುವುದರಿಂದ, ಯಾರಿಗೆ ಅರ್ಥವಾದಂತೆ ಅವರು ತಮ್ಮ ಮತಗಳನ್ನು ತಯಾರಿಮಾಡಿಕೊಳ್ಳುವುದು ನಡೆದಿದೆ. ‘ದೇವರು ಮನುಷ್ಯನಂತೆ

ಹುಟ್ಟುತ್ತಾನೆ' ಎಂದು ಅರ್ಥವಾಡಿಕೊಳ್ಳುವುದರಿಂದ ಹಿಂದೂಮತ ತಯಾರಾಗಿದೆ. 'ದೇವರು ಮನುಷ್ಯನಂತೆ ಹುಟ್ಟುವುದಿಲ್ಲವೆಂದು' ಅರ್ಥವಾದವರು ತಮ್ಮ ಮತ ಇಸ್ಲಾಮ್‌ಯೆಂದು ಹೇಳಿಕೊಳ್ಳುವುದು ನಡೆದಿದೆ. ಹಾಗೆಯೇ ದೇವರು ಹೇಳಿದ ಬೋಧನೆ ಒಂದೇ ಆದರೂ ಅದು ಅರ್ಥವಾದ ಭಾವನೆಯನ್ನು ಅನುಸರಿಸಿ ಕ್ರೈಸ್ತ ಮತ್ತು ಇಸ್ಲಾಮ್ (ಮುಸ್ಲಿಮ್) ಮತ ಹುಟ್ಟಿಬಂದಿವೆ. ದೇವರು ಹೇಳಿದ ಬೋಧನೆಯಲ್ಲಿ ಕೆಲವು ವಿಷಯಗಳು ಎಲ್ಲರಿಗೂ ಒಂದೇ ವಿಧವಾಗಿ ಅರ್ಥವಾದರೂ, ಮತ್ತೆ ಕೆಲವು ವಿಷಯಗಳಲ್ಲಿ ಬೇರೆಬೇರೆ ವಿಧಗಳಾಗಿ ಅರ್ಥವಾಗುವುದರಿಂದ, ಅವರಿಗೆ ಅರ್ಥವಾದ ವಿಧವಾಗಿ ಅವರು ಅವರ ಮತವನ್ನು ತಯಾರು ಮಾಡಿಕೊಳ್ಳುವುದು ನಡೆದಿದೆ. ಈ ವಿಧವಾಗಿ ಮೂರು ಮತಗಳು ತಯಾರಾಗಿ, ಮೂರು ಮತಗಳು ದೇವರ ವಿಷಯದಲ್ಲಿ ಮೂರು ವಿಧಗಳವರೆಗೆ ಅಲ್ಲದೆ, ಅನೇಕ ವಿಧಗಳಾಗಿ ಭಿನ್ನಾಭಿಪ್ರಾಯಗಳು ಹೊಂದಿದ್ದಾರೆ.

ಮೂರು ಮತದವರು ಎಷ್ಟು ಭಿನ್ನಾಭಿಪ್ರಾಯಗಳು ಹೊಂದಿದ್ದರೂ ಅವರು ಮೂರು ಸಮಯಗಳಲ್ಲಿ ತಯಾರಾದ ಮೂರು ಗ್ರಂಥಗಳನ್ನೇ ಆಧಾರಮಾಡಿಕೊಂಡು, ಅವುಗಳನ್ನೇ ತಮ್ಮ ಗ್ರಂಥಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಮೂರು ಗ್ರಂಥಗಳಲ್ಲಿಯೂ ದೇವರ ಜ್ಞಾನವೇ ಇರುವುದರಿಂದ. ಮೂರು ಗ್ರಂಥಗಳ ಜ್ಞಾನವನ್ನು ದೇವರೇ (ಆತ್ಮವೇ) ಹೇಳಿರುವುದರಿಂದ, ಮೂರು ಗ್ರಂಥಗಳನ್ನು ದೈವಗ್ರಂಥಗಳೆಂದು ಹೇಳಬಹುದು. ಆದ್ದರಿಂದ ಮೂರು ಗ್ರಂಥಗಳ ಮುಂದೆ **'ದೈವ'** ಎಂದು ದೇವರನ್ನು ಗುರುತು ಮಾಡಬೇಕಾಗಿದೆ. ಆದರೆ ಈದಿನ ಒಬ್ಬ ಮುಸ್ಲಿಮ್ ಹೊರತುಪಡಿಸಿ ಉಳಿದವರ‍್ಯಾರೂ ತಮ್ಮ ಗ್ರಂಥಗಳ ಮುಂದೆ **'ದೈವ'** ಎಂದು ದೇವರ ಗುರುತನ್ನು ಇಡುತ್ತಿಲ್ಲ. ಮುಸ್ಲಿಮ್‌ರು ತಮ್ಮ ಗ್ರಂಥವನ್ನು 'ಅಂತಿಮ ದೈವಗ್ರಂಥ' ಎಂದು ಹೇಳುತ್ತಿರುವಾಗ, ಕ್ರೈಸ್ತರು ತಮ್ಮದು ಪರಿಶುದ್ಧ ಗ್ರಂಥ' ಎಂದು ಕರೆಯುತ್ತಿದ್ದಾರೆ. ಹಿಂದೂಗಳು ಭಗವದ್ಗೀತೆ ಮುಂದೆ ಏನು ಹೇಳದಂತೆ 'ಭಗವದ್ಗೀತೆ' ಎಂದು ಮಾತ್ರ ಕರೆಯುತ್ತಿದ್ದಾರೆ. ಈ ವಿಧವಾಗಿ ಮೂರು ಗ್ರಂಥಗಳನ್ನು ಮೂರು ಮತದವರು ಹೇಳುತ್ತಿರುವುದನ್ನು ನಿತ್ಯ

ನೋಡುತ್ತಲೇ ಇದ್ದೇವೆ. ವಾಸ್ತವಕ್ಕೆ ಮೂರು ಗ್ರಂಥಗಳ ಬೋಧನೆಯನ್ನು ದೇವರೇ ತನ್ನ ಆತ್ಮ ಮೂಲಕ ಹೇಳಿರುವುದರಿಂದ ಮೂರು ಗ್ರಂಥಗಳನ್ನು ದೇವರ ಗ್ರಂಥಗಳೆಂದೇ ಹೇಳಬೇಕು. ಆದರೆ ತಿಳಿದೊ ತಿಳಿಯದೆಯೊ ಮುಸ್ಲಿಮ್‌ರು ಮಾತ್ರ ತಮ್ಮ ಗ್ರಂಥವನ್ನು (ಖುರಾನ್‌ನನ್ನು) ದೈವಗ್ರಂಥ ಎಂದು ಕರೆಯುತ್ತಿದ್ದಾರೆ. ಉಳಿದ ಎರಡು ಮತದವರು ಆ ಮಾತನ್ನು ಹೇಳುತ್ತಿಲ್ಲ.

ವಾಸ್ತವವಾಗಿ ದೇವರು ಒಂದೇ ಜ್ಞಾನವನ್ನೇ ಸೃಷ್ಟಿ ಆದಿಯಲ್ಲಿ ಬೋಧಿಸಿದಾಗ, ಅದು ಮೂರು ಬೇರೆಬೇರೆ ಸಮಯಗಳಲ್ಲಿ, ಬೇರಬೇರೆ ವ್ಯಕ್ತಿಗಳ ಮೂಲಕ ಹೊರಗೆ ಬರುವುದರಿಂದ ಮೂರು ಬೇರೆಬೇರೆ ಗ್ರಂಥಗಳಾಗಿ ಬರೆಯಲ್ಪಟ್ಟಿವೆ. ಮೂರು ಬೇರೆ ಗ್ರಂಥಗಳಾಗಿ ಇದ್ದರೂ, ಆ ಮೂರು ಗ್ರಂಥಗಳನ್ನು ಮೂರು ದೈವಗ್ರಂಥಗಳಾಗಿಯೇ ಹೇಳಬೇಕಾಗಿರುತ್ತದೆ. ಆದುದರಿಂದ ಮೊದಲು ತಯಾರಾದ ಗ್ರಂಥವನ್ನು 'ಪ್ರಥಮ ದೈವಗ್ರಂಥವೆಂದು' ಹೇಳುತ್ತಿದ್ದೇವೆ. ನಂತರ ತಯಾರಾದ ಗ್ರಂಥವನ್ನು 'ದ್ವಿತೀಯ ದೈವಗ್ರಂಥವೆಂದು' ಕರೆಯುತ್ತಿದ್ದೇವೆ. ಮೂರನೆಸಲ ತಯಾರಾದ ಗ್ರಂಥವನ್ನು 'ಅಂತಿಮ ದೈವಗ್ರಂಥ' ಎಂದು ಕರೆಯುತ್ತಿದ್ದೇವೆ. ಈ ವಿಧವಾಗಿ ನಾವು ಹೇಳುವುದಲ್ಲದೆ ಇವುಗಳಿಗೆ ಈ ಹೆಸರುಗಳು ಬರುವುದಕ್ಕೆ ಶಾಸ್ತ್ರಬದ್ಧವಾದ ಆಧಾರ ಕೂಡಾ ಇದೆ. ಅದೇನೆಂದರೆ! ಬ್ರಹ್ಮವಿದ್ಯಾ ಶಾಸ್ತ್ರವಾದ ಅಂತಿಮ ದೈವಗ್ರಂಥದಲ್ಲಿ ಸೂರಾ 42, ಆಯತ್ 51ರಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ. **(42–51) "ದೇವರು ಯಾವ ಮಾನವನೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾಗುವ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿಮೂಲಕ ಅಥವಾ ತೆರೆಮರೆಯಿಂದಲೋ ಮನುಷ್ಯನಿಗೆ ಸೇರಿಸುತ್ತಾನೆ. ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳಿಸುತ್ತಾನೆ. ಆತನು ಮಹೋನ್ನತನು. ಎಷ್ಟೋ ವಿವೇಕವಂತನು."**

ಮೇಲೆ ಹೇಳಿದ ಈ ವಾಕ್ಯದಲ್ಲಿ ದೇವರು ಮನುಷ್ಯನಿಗೆ ಮೂರು ವಿಧಾನಗಳ ಮೂಲಕ ಜ್ಞಾನವನ್ನು ತಿಳಿಸುತ್ತಾನೆಂದು ಅರ್ಥವಾಗುತ್ತಿದೆ. ಅದರಲ್ಲಿ

ಮೊದಲೇ ಸೃಷ್ಟಿ ಆದಿಯಲ್ಲಿಯೇ ಒಂದು ವಿಧಾನವಾದ ವಹಿ (ವಾಣಿ) ಮೂಲಕ ಜ್ಞಾನ ಹೇಳುವುದಾಗಿದೆ. ವಿಶ್ವದಲ್ಲಿ **ದೇವರು ಒಬ್ಬನೇ, ದೇವರ ಜ್ಞಾನ ಒಂದೇಯೆಂದು** ಬ್ರಹ್ಮವಿದ್ಯಾ ಶಾಸ್ತ್ರದಿಂದ ತಿಳಿಯಲ್ಪಡುತ್ತಿದೆ. ಮೊದಲು ಆಕಾಶವಾಣಿ ಮೂಲಕ ಹೇಳಲ್ಪಟ್ಟ ಜ್ಞಾನ, ದೇವರ ಆತ್ಮದಿಂದ ಹೇಳಲ್ಪಟ್ಟ ಜ್ಞಾನವಾದ್ದರಿಂದ ಅದು ಎಂದಿಗೂ ಬದಲಾಗುವುದಿಲ್ಲ. ನಂತರ ದೇವರ ಜ್ಞಾನ ಭೂಮಿಮೇಲೆ ಮನುಷ್ಯರಿಗೆ ಹೇಳಿದರೂ, ಅದು ಮೊದಲು ಹೇಳಿದ ಜ್ಞಾನದೊಂದಿಗೆ ಸಮಾನವಾಗಿರುತ್ತದೆ. ದೇವರು ತನ್ನ ಜ್ಞಾನವನ್ನು ಮೂರು ವಿಧಾನಗಳ ಮೂಲಕ ತಿಳಿಸುತ್ತೇನೆಂದು ಹೇಳಿದಂತೆ, ಮೊದಲು ವಹಿ ಮೂಲಕ (ವಾಣಿ ಮೂಲಕ) ತಿಳಿಸಿದ್ದಾನೆ. ಮೊದಲು ತಿಳಿಸಿದ ಜ್ಞಾನವೇ ಅಲ್ಲದೆ, ಮೊದಲು ತಿಳಿಸಿದ ವಿಧಾನಗಳಲ್ಲಿ ಒಂದರ ಮೂಲಕ ತಿಳಿಸುವುದರಿಂದ, ಆ ವಿಧಾನದ ಮೂಲಕ ಹೇಳಿದ ಜ್ಞಾನ ಗ್ರಂಥರೂಪವಾದಾಗ ಅದನ್ನು **'ಪ್ರಥಮ ದೈವಗ್ರಂಥ'** ಎಂದು ಹೇಳಿದ್ದಾರೆ. ಹಾಗೆ ಎರಡನೆ ವಿಧಾನದ ಮೂಲಕ ತಿಳಿಸಿದ ಜ್ಞಾನ ಗ್ರಂಥರೂಪವಾದಾಗ ಅದನ್ನು **'ದ್ವೀತಿಯ ದೈವಗ್ರಂಥ'** ಎಂದು ಕರೆದಿದ್ದಾರೆ. ಕೊನೆಯದಾಗಿ ಉಳಿದ ವಿಧಾನ ತೆರಮರೆಯಿಂದ ತಿಳಿಸಿರುವುದು. ಅದು ಕೊನೆಯದಾಗಿ ಹೇಳಲಾದ ವಿಧಾನವಾದ್ದರಿಂದ ಅದರ ಮೂಲಕ ಬಂದ ಜ್ಞಾನ ಗ್ರಂಥವಾಗಿದ್ದು ಆ ಗ್ರಂಥವನ್ನು 'ಕೊನೆಯ ದೈವಗ್ರಂಥವೆಂದು' ಅಥವಾ **'ಅಂತಿಮ ದೈವಗ್ರಂಥವೆಂದು'** ಹೇಳುವುದಾಗಿದೆ. **ಪ್ರಥಮ, ಮಧ್ಯಮ, ಅಂತಿಮ,** ಎನ್ನುವುದು ಶಾಸ್ತ್ರಪದ್ಧತಿಯನ್ನು ಅನುಸರಿಸಿ ಹೇಳುವುದೆಂದು ಹೇಳಬಹುದು. ಶಾಸ್ತ್ರೀಯತೆ ಪ್ರಕಾರ ಭಗವದ್ಗೀತೆ ಪ್ರಥಮ ದೈವಗ್ರಂಥ, ಖುರಾನ್ ಅಂತಿಮ ದೈವಗ್ರಂಥ. ಈ ವರಸೆ ಕ್ರಮವನ್ನು ಯಾರೂ ಬದಲಾಯಿಸುವುದಕ್ಕೆ ಸಾಧ್ಯವಿಲ್ಲ.

ಒಂದೇ ಜ್ಞಾನವೇ ಮೂರುಸಲ, ಮೂರು ವಿಧಾನಗಳ ಮೂಲಕ ಹೇಳುವುದರಿಂದ ಮೂರು ವರಸೆ ಗ್ರಂಥಗಳಾಗಿವೆ. ಮೂರರಲ್ಲಿಯೂ ಒಂದೇ ದೈವಜ್ಞಾನ ಇರುವುದರಿಂದ ಮೂರನ್ನು ದೈವಗ್ರಂಥಗಳೆಂದು ಹೇಳುವುದು ನಡೆದಿದೆ. ಸೃಷ್ಟಿ ಆದಿಯಲ್ಲಿ ಹೇಳಲಾದ ಮೊದಲ ಜ್ಞಾನ ಎಂದರೆ

ಆಕಾಶವಾಣಿಯಿಂದ ಹೇಳಲಾದ ಜ್ಞಾನ ಪ್ರಥಮ ದೈವಗ್ರಂಥವಾಗಿದ್ದು, ಉಳಿದ ಎರಡು ಗ್ರಂಥಗಳಲ್ಲಿಯೂ ಕೂಡಾ ಅದೇ ಜ್ಞಾನವೇ ಇರುವುದಾಗಿದೆ. ಹೇಳುವ ಭಾಷೆಯಲ್ಲಿಯೂ, ಬರೆಯುವ ಬರಹದಲ್ಲಿಯೂ ಸ್ವಲ್ಪ ವ್ಯತ್ಯಾಸ ಇರಬಹುದು ಆದರೆ, ಭಾವನೆಯಲ್ಲಿ ಮಾತ್ರ ವ್ಯತ್ಯಾಸ ಇರುವುದಿಲ್ಲ. ಆದುದರಿಂದ ಮೂರು ಗ್ರಂಥಗಳನ್ನು ಒಂದೇ ಜ್ಞಾನ ಗ್ರಂಥಗಳಾಗಿ ಹೇಳಬಹುದು. ಮತಭೇದ ಮನುಷ್ಯರಲ್ಲಿ ಇರಬಹುದು ಆದರೆ, ಗ್ರಂಥಗಳಲ್ಲಿ ಇಲ್ಲ. ಆದುದರಿಂದ ಕೊನೆಯ ಗ್ರಂಥ ತನಗಿಂತ ಮೊದಲು ಬಂದ ಎರಡು ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತಿದೆ. ಹಾಗೆ ಮೊದಲ ಗ್ರಂಥ ತನ್ನ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆಯೆಂದು ಹೇಳುತ್ತಿದೆ.

**ಪ್ರಶ್ನೆ :– ಕೆಲವರು ಮುಸ್ಲಿಮ್‌ರು ಮೊದಲು ಬಂದ ಎರಡು ಗ್ರಂಥಗಳಲ್ಲಿ ಇಲ್ಲದ ವಿಷಯಗಳು ಮೂರನೆ ಗ್ರಂಥವಾದ ಖುರಾನ್‌ನಲ್ಲಿ ಇವೆಯೆಂದು, ಕೊನೆಯದಾಗಿ ಬಂದಿರುವ ಗ್ರಂಥದಲ್ಲಿಯೇ ಹೆಚ್ಚಾಗಿ ಜ್ಞಾನವಿದೆಯೆಂದು, ಖುರಾನ್‌ಗಿಂತ ಮೊದಲು ಬಂದಿರುವ ಎರಡು ಗ್ರಂಥಗಳು ಕೆಲಸಕ್ಕೆ ಬರುವುದಿಲ್ಲವೆಂದು, ಆದುದರಿಂದ ಅವುಗಳನ್ನು ಬಿಟ್ಟು ಖುರಾನ್ ಗ್ರಂಥವನ್ನು ಎಲ್ಲರೂ ಆಶ್ರಯಿಸಬೇಕೆಂದು, ಖುರಾನ್‌ನಿಂದಲೇ ದೇವರನ್ನು ತಿಳಿಯುವುದಕ್ಕೆ ಸಾಧ್ಯವಾಗುತ್ತದೆಂದು, ಖುರಾನ್ ಇಲ್ಲದಮುನ್ನ ಮೊದಲು ಎರಡು ಗ್ರಂಥಗಳು ಅಗತ್ಯವಾದವುಗಳಾದರೂ, ಖುರಾನ್ ಅಂತಿಮ ಗ್ರಂಥವಾಗಿ ಬಂದ ನಂತರ ಮೊದಲು ಎರಡು ಗ್ರಂಥಗಳು ಅಗತ್ಯವಿಲ್ಲವೆಂದು, ಕೊನೆಯ ಗ್ರಂಥವಾದ ಖುರಾನ್‌ನಲ್ಲಿ ಪ್ರಸ್ತುತ ಕಾಲದಲ್ಲಿ ಅಗತ್ಯವಾದ ಜ್ಞಾನ ಇದೆಯೆಂದು, ಆದುದರಿಂದಲೇ ಪೂರ್ವದಲ್ಲಿ ಎರಡು ಗ್ರಂಥಗಳಿಗಿಂತ ಕೊನೆಯದಾಗಿ ಬಂದಿರುವ ಗ್ರಂಥವನ್ನು ಆಶ್ರಯಿಸಿದವರೇ ಮುಕ್ತಿಯನ್ನು ಪಡೆಯುತ್ತಾರೆಂದು, ಖುರಾನ್ ಅಲ್ಲದೆ ಉಳಿದ ಎರಡು ಗ್ರಂಥಗಳನ್ನು ಆಶ್ರಯಿಸಿದವರು, ಸಂಪೂರ್ಣ ಜ್ಞಾನ ತಿಳಿಯದೆ, ಅಜ್ಞಾನದಲ್ಲಿಯೇ ಇರುತ್ತಾರೆಂದು ಹೇಳುತ್ತಿದ್ದಾರೆ. ಅವರು ಹೇಳುವ ಮಾತು ಎಲ್ಲಿಯವರೆಗು ವಾಸ್ತವ?**

**ಉತ್ತರ:–** ಇದೆಲ್ಲವೂ ಮತದ ಮುಸುಗಿನಲ್ಲಿರುವ ಮನುಷ್ಯರು ಹೇಳುವ ವಿಷಯವೇ ಹೊರತು, ಗ್ರಂಥದಲ್ಲಿರುವ ವಿಷಯ ಅಲ್ಲ. ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥವೇ ತನಗಿಂತ ಮೊದಲು ಬಂದಿರುವ ಎರಡು ಗ್ರಂಥಗಳನ್ನು ಸತ್ಯವೆಂದು ಸಾಕ್ಷಿ ಕೊಡುತ್ತಿರುವಾಗ ಮನುಷ್ಯರು ಎರಡು ಗ್ರಂಥಗಳು ಕೆಲಸಕ್ಕೆ ಬರುವುದಿಲ್ಲ ಎನ್ನುವುದರಲ್ಲಿ ಅರ್ಥವೇ ಇಲ್ಲ. ಶಾಸ್ತ್ರಬದ್ಧವಾಗಿ ಖುರಾನ್ ಗ್ರಂಥ ತನಗಿಂತ ಮೊದಲು ಬಂದಿರುವ ತೌರಾತ್, ಇಂಜೀಲ್ (ಭಗವದ್ಗೀತೆ, ಬೈಬಲ್) ಗ್ರಂಥಗಳ ಜ್ಞಾನವನ್ನು ಧೃಢೀಕರಿಸುತ್ತಾ, ಸತ್ಯವೆಂದು ಹೇಳುತ್ತಿದೆ. ಈ ವಿಷಯವಾಗಿ ಸುರಾ ಐದು, ಆಯತ್ 48ರಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ. **(5–48) "ನಾವು ನಿಮ್ಮ ಕಡೆಗೆ ಈ ಗ್ರಂಥವನ್ನು (ಖುರಾನನ್ನು) ಸತ್ಯ ಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತಿದೆ. ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೂಭಾವನೆಗಳನ್ನು ಅನುಸರಿಸಬೇಡ"** ಈ ವಾಕ್ಯದಲ್ಲಿ ಖುರಾನ್‌ಗಿಂತ ಮೊದಲು ಬಂದಿರುವ ಗ್ರಂಥಗಳು ಸತ್ಯವೆಂದು ಖುರಾನ್ ಗ್ರಂಥವೇ ಹೇಳಿದಂತಿರುವಾಗ ಮನುಷ್ಯರು ಅಲ್ಲವೆಂದು ಹೇಳುವುದು ಅಜ್ಞಾನವೇ ಅಲ್ಲವೆ! ಆದುದರಿಂದ ವಾಕ್ಯದ ಕೊನೆಯಲ್ಲಿ "ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ (ಮನುಷ್ಯರ) ಮನೋಭಾವನೆಗಳನ್ನು ಅನುಸರಿಸಬೇಡ" ಎಂದು ಹೇಳಿದ್ದಾರೆ. ಆ ವಾಕ್ಯ ಹೇಳಿದರೂ ಮೂರ್ಖವಾಗಿ ನಮ್ಮ ಗ್ರಂಥವೇ ಶ್ರೇಷ್ಠ ಎನ್ನುವುದು ಅಜ್ಞಾನವೇ ಆಗುತ್ತದೆ. ಅಷ್ಟೇ ಅಲ್ಲದೆ ತೌರಾತ್ (ಭಗವದ್ಗೀತೆಯ)ನ್ನು ಸ್ವೀಕರಿಸದೆ ಇತರ ಗ್ರಂಥಗಳನ್ನು ಸ್ವೀಕರಿಸಿದರೂ, ದೇವರ ವಾಕ್ಯವನ್ನು ಧಿಕ್ಕರಿಸಿದಂತೆಯೆಂದು ಕೂಡಾ ಇದೇ ಖುರಾನ್ ಗ್ರಂಥದಲ್ಲಿ 62ನೇ ಸೂರಾ, 5ನೇ ಆಯತ್‌ನಲ್ಲಿ ಹೇಳಿದ್ದಾರೆ ನೋಡಿರಿ. **(62–5) "ತೌರಾತು ಗ್ರಂಥದ ಪ್ರಕಾರ ಆಚರಿಸಬೇಕೆಂದು ಅದೇಶಿಸಿದರೂ ಅದಕ್ಕೆ ಅನುಗುಣವಾಗಿ ಅಚರಿಸದವರು ಎಷ್ಟು ಗ್ರಂಥಗಳು ಅನುಸರಿಸಿದರೂ, ಅಂಥವರನ್ನು ಎಷ್ಟೋ ಗ್ರಂಥಗಳನ್ನು ಬೆನ್ನಿನ ಮೇಲೆ ಹೊರುವ ಕತ್ತೆಯಂಥವರೆಂದು ಉಪಮಾನವಾಗಿ ಹೇಳಬಹುದು. ದೇವರ ವಾಕ್ಯಗಳನ್ನು ಧಿಕ್ಕರಿಸಿದವರ ದೃಷ್ಟಾಂತ ಬಹಳ ಕೆಟ್ಟದು. ದುರ್ಮಾರ್ಗದ ಜನರಿಗೆ ದೇವರು (ಅಲ್ಲಾಹ್) ಸನ್ಮಾರ್ಗವನ್ನು ತೋರಿಸುವುದಿಲ್ಲ."**

ಈ ವಾಕ್ಯದಲ್ಲಿ ಹೇಳಿದ ಸಾರಾಂಶವನ್ನು ನೋಡಿದರೆ ಭಗವದ್ಗೀತೆ ಪ್ರಕಾರ ಆಚರಿಸಬೇಕೆಂದು ದೇವರು ಹೇಳಿದ್ದರೂ, ಅದಕ್ಕೆ ಅನುಗುಣವಾಗಿ ಆಚರಿಸದವರು ಎಂದರೆ! ಭಗವದ್ಗೀತೆಯನ್ನು ಬಿಟ್ಟು ಉಳಿದ ಗ್ರಂಥಗಳನ್ನು ಅನುಸರಿಸಿದವರು 'ಗ್ರಂಥಗಳು ಬೆನ್ನಿನಮೇಲೆ ಹೊರುವ ಪ್ರಾಣಿಗಳಿಗೆ' ಸಮಾನವಾಗಿ ಹೇಳಿದ್ದಾರೆ. ಇದರಪ್ರಕಾರ ನೋಡಿದರೆ ಭಗವದ್ಗೀತೆ ಜ್ಞಾನವನ್ನು ಮೊದಲು ಅನುಸರಿಸುತ್ತಾ ನಂತರ ಉಳಿದ ಗ್ರಂಥಗಳನ್ನು ಅನುಸರಿಸಬಹುದೆಂದು ಇಲ್ಲಿ ಹೇಳಿದ್ದಾನೆ. ಇದರ ಪ್ರಕಾರ ನೋಡಿದರೆ 'ಖುರಾನ್ ದೊಡ್ಡದು, ತೌರಾತ್ ಚಿಕ್ಕದು' ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ದೇವರ ದೃಷ್ಠಿಯಲ್ಲಿ ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿದೆ. ಆದರೆ ಉಳಿದ ಎರಡು ಗ್ರಂಥಗಳಲ್ಲಿ ಇಲ್ಲದ ಜ್ಞಾನ ವಿಷಯಗಳು ಕೂಡಾ 'ಮೂರು ಆತ್ಮಗಳನ್ನು ಕುರಿತು ಹೇಳಿರುವ ಭಗವದ್ಗೀತೆ (ತೌರಾತು) ಗ್ರಂಥದಲ್ಲಿ ಇರುವುದರಿಂದ, ಮೊದಲು ಅದನ್ನು ನೋಡಿದ ನಂತರ ಉಳಿದ ಗ್ರಂಥಗಳು ಓದಬಹುದು. ಉಳಿದ ಎರಡು ಗ್ರಂಥಗಳಲ್ಲಿ ಇಲ್ಲದ ಕೆಲವು ವಿಷಯಗಳು ತೌರಾತ್‌ನಲ್ಲಿ ಇರುವುದರಿಂದ, ಮೊದಲು ತಯಾರಾದ ಗ್ರಂಥ ತೌರಾತು ಆಗಿರುವುದರಿಂದ ಉಳಿದ ಗ್ರಂಥಗಳಿಗಿಂತ ಮೊದಲು ತೌರಾತನ್ನು (ಭಗವದ್ಗೀತೆಯನ್ನು) ಅನುಸರಿಸಬೇಕು.

**ಪ್ರಶ್ನೆ :– ತೌರಾತ್ ಗ್ರಂಥ, ಭಗವದ್ಗೀತೆ ಗ್ರಂಥ ಎರಡೂ ಒಂದೇ ಗ್ರಂಥವಾ?**

**ಉತ್ತರ :–** ಹೌದು. ತೌರಾತ್, ಭಗವದ್ಗೀತೆಯೆನ್ನುವ ಎರಡು ಹೆಸರುಗಳು ಒಂದೇ ಭಗವದ್ಗೀತೆಗೆ ಇವೆಯೆಂದು ಹೇಳುತ್ತಿದ್ದೇವೆ. ಎರಡು ಹೆಸರುಗಳಿರುವವು ಒಂದೇ ಗ್ರಂಥವೆನ್ನುವುದು ದೊಡ್ಡ ರಹಸ್ಯ. ಆದರೂ ನೀವು ಜ್ಞಾನ ತಿಳಿಯುವ ನಿಮಿತ್ತ ದೊಡ್ಡ ರಹಸ್ಯವನ್ನು ಕೂಡಾ ಸುಲಭವಾಗಿ ತಿಳಿಸುತ್ತಿದ್ದೇವೆ. ಎರಡೂ ಒಂದೇ ಗ್ರಂಥವೆಂದು ಹೇಳುವುದು ಎಷ್ಟು ದೊಡ್ಡ ರಹಸ್ಯವೊ ತಿಳಿಯುವುದಕ್ಕೆ ನಮ್ಮ ರಚನೆಯಲ್ಲಿನ **"ಕೃಷ್ಣಮೂಸ"** ಎನ್ನುವ 76ನೇ ರಚನೆ ಗ್ರಂಥ\ವನ್ನು ನೋಡಿರಿ. ತೌರಾತು ಭಗವದ್ಗೀತೆ ಒಂದೇ ಜ್ಞಾನವೆಂದು, ಒಂದೇ ಗ್ರಂಥವೆಂದು ತಿಳಿಯುವುದು ದೈವ ರಹಸ್ಯವನ್ನು ತಿಳಿದಂತಾಗುತ್ತದೆ. ಈ ರಹಸ್ಯವನ್ನು

ತಿಳಿಯುವುದರಿಂದ ಆಧ್ಯಾತ್ಮಿಕ ರಂಗದಲ್ಲಿ ಎಷ್ಟೋ ತಿಳಿಯದ ಪ್ರಶ್ನೆಗಳಿಗೆ ಸಮಾಧಾನ ಸುಲಭವಾಗಿ ದೊರೆಯುತ್ತದೆ.

**ಪ್ರಶ್ನೆ :– ಇಲ್ಲಿಯವರೆಗೂ ತಿಳಿದ ಸಮಾಚಾರದ ಪ್ರಕಾರ ಮೂರು ಗ್ರಂಥಗಳ ಹೆಸರುಗಳು ತಿಳಿದುಹೋಗಿವೆ. ಆದರೆ ನೀವು ಕೆಲವು ಸಂದರ್ಭಗಳಲ್ಲಿ ಮಾತನಾಡುತ್ತಾ ಮೂರು ಗ್ರಂಥಗಳು ಒಂದೇ ಗ್ರಂಥದಲ್ಲಿನವೇ, ಒಂದೇ ಗ್ರಂಥವನ್ನೇ ಮೂರು ಗ್ರಂಥಗಳಾಗಿ ವಿಭಜಿಸಿಕೊಂಡು ಬೇರೆಬೇರೆ ಹೆಸರುಗಳು ಹೇಳುತ್ತಿದ್ದಾರೆಂದು ಹೇಳಿದ್ದಾರೆ. ಅಷ್ಟೇಅಲ್ಲದೆ ಖುರಾನ್ ಗ್ರಂಥದಲ್ಲಿ ಸೂರಾ ಆರು, ಆಯತ್ 91ರಲ್ಲಿ ಹೀಗೆ ಹೇಳಿದ್ದಾರೆ. (6–91) "ದೇವರು ಯಾವ ಮಾನವನಮೇಲೆ ಎಂತಹ ಜ್ಞಾನ ವಿಷಯವನ್ನು ಪ್ರಸಾರಮಾಡಅಲ್ಲ ಎಂದು ಹೇಳಿದಾಗ ಆ ಅವಿಶ್ವಾಸ ಜನರು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ವಿಧವಾಗಿ ಅರ್ಥ ಮಾಡಿಕೊಳ್ಳಅಲ್ಲ. ಅವರನ್ನು ಕೇಳು ಮೂಸ ತಂದಿರುವ ತೌರಾತು ಗ್ರಂಥವನ್ನು ಯಾರು ಅವತರಿಸಿದಂತೆ ಮಾಡಿದಹಾಗೆ? ಆ ಗ್ರಂಥ ಒಂದು ಜ್ಯೋತಿ, ಮಾನವರಿಗಾಗಿ ಮಾರ್ಗದರ್ಶಕತ್ವ. ನೀವು ಅದನ್ನು ಬೇರೆಬೇರೆ ಕಾಗದ ಗ್ರಂಥಗಳಾಗಿ ವಿಭಜಿಸಿ ತೋರಿಸುತ್ತಿದ್ದೀರ. ಎಷ್ಟೋ ವಿಷಯಗಳನ್ನು ಬಚ್ಚಿಡುತ್ತಿದ್ದೀರ. ನಿಮಗಾಗಲಿ, ನಿಮ್ಮ ಹಿರಿಯರಿಗಾಗಲಿ ತಿಳಿಯದ ಎಷ್ಟೋ ವಿಷಯಗಳು ಇಂದುಮೂಲವಾಗಿ ನಿಮಗೆ ತಿಳಿಸಲ್ಪಟ್ಟಿವೆ. ತೌರಾತ್‌ನನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ಯೇ ಎಂದು ಹೇಳು. ಆ ನಂತರ ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿ ಆಡಿಕೊಳ್ಳಲು ಬಿಡು".**

**ಉತ್ತರ :–** ಮೇಲಿನ ವಾಕ್ಯದಲ್ಲಿ ದೇವರು ಹೇಳಿದಂತೆ ತೌರಾತು ಗ್ರಂಥವೇ ಉಳಿದ ಎರಡು ಗ್ರಂಥಗಳಾಗಿ ಹೇಳಲ್ಪಡುತ್ತಿವೆ. ತೌರಾತು ಗ್ರಂಥದಲ್ಲಿನ ವಿಷಯಗಳೇ ಬೈಬಲ್, ಖುರಾನ್ ಗ್ರಂಥಗಳಲ್ಲಿ ಇರುವುದರಿಂದ ಮೂರು ಒಂದೇ ಗ್ರಂಥವೆಂದು, ಅದೇ ತೌರಾತು ಗ್ರಂಥವೆಂದು ಹೇಳಬಹುದು. ಒಂದೇ ತೌರಾತ್ ಗ್ರಂಥ ಉಳಿದ ಎರಡು ಗ್ರಂಥಗಳಾಗಿ ತಯಾರಾಗಿ ಒಟ್ಟು ಮೂರು ಗ್ರಂಥಗಳಾಗಿ ಕಾಣಿಸುತ್ತಿದೆ. ಇನ್ನೊಂದು ತಿಳಿಯದ ವಿಷಯ ಕೂಡಾ ಇದೆ.

ಅದೇನೆಂದರೆ! ಗ್ರಂಥವಲ್ಲದ ಜ್ಞಾನವಾಗಿ, ದೇವರು ಆದಿಯಲ್ಲಿ ಹೇಳಲ್ಪಟ್ಟ ಜ್ಞಾನ **"ಜಪರ"** ಎನ್ನುವ ಹೆಸರಿನಿಂದ ಇರುತ್ತಿತ್ತು. ಜಪರ ಎನ್ನುವ ಜ್ಞಾನ ಕೃತಯುಗ, ತ್ರೈತಾಯುಗ, ದ್ವಾಪರಯುಗ ಎನ್ನುವ ಮೂರು ಯುಗಗಳು ಕಳೆಯುವವರೆಗು ಇದ್ದಿತ್ತು. ಹಾಗೆ ಇರುವುದರಲ್ಲಿ ಕಾಲಕ್ರಮೇಣ ಆ **"ಜಪರ"** ಎನ್ನುವ ಹೆಸರು ಸ್ವಲ್ಪ ಬದಲಾಗಿಹೋಗಿ **'ಜಬುರ'** ಎನ್ನುವ ಹೆಸರಾಗಿ ನಿಂತುಹೋಗಿದೆ. ಜಬುರ ಜ್ಞಾನವೇ ಕಲಿಯುಗ ಆರಂಭದಲ್ಲಿ ಭಗವದ್ಗೀತೆಯಾಗಿ ತಯಾರಾಗಿದೆ. ನಂತರ ಅದೇ ಜ್ಞಾನವೇ ಬೈಬಲ್, ಖುರಾನಾಗಿ ಇದ್ದರೂ ಅದು ಭಗವದ್ಗೀತೆಯೆಂದು ತಿಳಿಯದೆ ಹೋಗಿದೆ. ಶಬ್ದರೂಪದಲ್ಲಿ (ವಾಕ್ಯರೂಪದಲ್ಲಿ) ಇರುವ ಜಬುರ ಮೊದಲು ಭಗವದ್ಗೀತೆಯೆನ್ನುವ ಗ್ರಂಥರೂಪವಾಗಿ ನಂತರ ಅದೇ ಉಳಿದ ಎರಡು ಗ್ರಂಥಗಳಾಗಿದೆ. ಒಂದು ಶಬ್ದ (ಒಂದು ಜ್ಞಾನ) ಒಂದು ಗ್ರಂಥವಾಗಿ ತಯಾರಾಗಿದೆ. ಒಂದು ಗ್ರಂಥ ಉಳಿದ ಎರಡು ಗ್ರಂಥಗಳಾಗಿ ತಯಾರಾಗಿದೆ.

**ಪ್ರಶ್ನೆ :– ಮೂರು ಗ್ರಂಥಗಳಲ್ಲಿ ಒಂದೇ ದೈವ ಜ್ಞಾನವಿದ್ದರೆ ಎಲ್ಲರೂ ಒಂದೇ ಸಮಾಜವಾಗಿ ಇರದೆ ಬೇರೆಬೇರೆ ಮತಗಳಾಗಿ ಏಕೆ ತಯಾರಾಗಿದ್ದಾರೆ?**

**ಉತ್ತರ :–** ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿದೆಯೆಂದು ಮನುಷ್ಯರಿಗೆ ತಿಳಿಯದಿರುವುದರಿಂದ, ಮೂರು ಗ್ರಂಥಗಳನ್ನು ಅಡ್ಡ ಇಟ್ಟುಕೊಂಡು ಮೂರು ಮತಗಳನ್ನು ತಯಾರು ಮಾಡಿಕೊಂಡಿದ್ದಾರೆ. ದೇವರೊಂದರ ದೈವ ಗ್ರಂಥಗಳಲ್ಲಿನ ದೇವರ ವಾಕ್ಯಗಳನ್ನು ಗ್ರಹಿಸಿಕೊಳ್ಳದವರು ಅವರಿಗಿರುವ ಅವಗಾಹನಾ ಲೋಪದಿಂದ ಗ್ರಂಥಗಳನ್ನು ಸೀಳಿಸಿಕೊಂಡಂತೆ, ದೇವರುಗಳನ್ನು ಕೂಡ ಸೀಳಿಸಿಕೊಂಡಿದ್ದಾರೆ. ದೇವರನ್ನು, ದೇವರ ಗ್ರಂಥಗಳನ್ನು ಸೀಳಿಸಿಕೊಳ್ಳುವುದಲ್ಲದೆ ಮತಗಳ ಗುಂಪುಗಳಾಗಿ ಕೂಡಾ ಸೀಳಿಹೋಗಿದ್ದಾರೆ. ಇದೆಲ್ಲವೂ ದೇವರ ಜ್ಞಾನ ಅರ್ಥವಾಗದೆ ಇರುವುದರಿಂದ ಏರ್ಪಟ್ಟ ಅನರ್ಥಗಳೇ ಮತಗಳಾಗಿ ಇವೆ. ಮತಗಳ ಅಜ್ಞಾನ ಮನುಷ್ಯರಿಂದ ತೊಲಗಿ ಹೋಗಬೇಕೆಂದರೆ, ದೇವರುಕೊಟ್ಟಿರುವ ಮೂರು ಗ್ರಂಥಗಳನ್ನು ಓದಿ ಮೂರು ಗ್ರಂಥಗಳ ಜ್ಞಾನವನ್ನು

ತಿಳಿಯಲ್ಪಟ್ಟರೆ, ಆಗ ಮತ ಮಾಯೆಯಿಂದ ಏರ್ಪಟ್ಟಿದೆಯೆಂದು ಎಲ್ಲರಿಗೂ ತಿಳಿದುಹೋಗುತ್ತದೆ. ಹೊಸ ಜ್ಞಾನ ತಿಳಿಯುವುದರಿಂದ ಮತಗಳ ಸಮಾಜಗಳು ಹೋಗಿ, ಮತ ರಹಿತವಾದ ಏಕ ಸಮಾಜ ಏರ್ಪಡುತ್ತದೆ. ಏಕ ಸಮಾಜದಲ್ಲಿ ಮತ ವ್ಯತ್ಯಾಸಗಳಾಗಲಿ, ದೇವರ ವ್ಯತ್ಯಾಸಗಳಾಗಲಿ, ಜ್ಞಾನದಲ್ಲಿ ವ್ಯತ್ಯಾಸಗಳಾಗಲಿ ಇರುವುದಿಲ್ಲ.

ಎಲ್ಲ ಗ್ರಂಥ ವಿಷಯಗಳನ್ನು ಶೋಧಿಸಿದ ನಂತರ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳು ಮೂರು ದೈವಗ್ರಂಥಗಳಾಗಿ ಲೆಕ್ಕಿಸಲ್ಪಡುತ್ತಿವೆ. ದೇವರು ಹೇಳಿದ ವರಸೆ ಕ್ರಮದಲ್ಲಿ ಹಿಂದೆ ಮುಂದೆ ತಯಾರಾದ ಗ್ರಂಥಗಳಿಗೆ ಆ ವರಸೆ ಪ್ರಕಾರವೇ ಪ್ರಥಮ, ದ್ವಿತೀಯ, ಅಂತಿಮ ಎಂದು ಹೆಸರುಗಳು ಇಡಲಾಗಿವೆ. ಮೊದಲು ತಯಾರಾದ ಆಕಾಶವಾಣಿ ಜ್ಞಾನವನ್ನು ಪ್ರಥಮ ದೈವಗ್ರಂಥವಾಗಿ ಹೇಳಿದ್ದಾರೆ. ಪ್ರಥಮ ದೈವಗ್ರಂಥ ಭಗವದ್ಗೀತೆಯೇ ಎಂದು ಬಹಳಜನರಿಗೆ ತಿಳಿದಿಲ್ಲ. ದೇವರ ಪ್ರತಿನಿಧಿ ಮೂಲಕ ಹೇಳಲಾದ ಜ್ಞಾನ ದ್ವಿತೀಯ ದೈವಗ್ರಂಥವಾಗಿ ತಯಾರಾಗಿದೆ. ಅದೇ ಬೈಬಲ್ ಗ್ರಂಥ. ತೆರೆಮರೆಯಿಂದ ಕೊನೆಯ ವಿಧಾನವಾಗಿ ಜಿಬ್ರಯೇಲ್ ಎನ್ನುವ ಕಾಣಿಸದ ಗ್ರಹದ ಮೂಲಕ ಹೇಳಲಾದ ಜ್ಞಾನ ಅಂತಿಮ ದೈವಗ್ರಂಥವಾಗಿ ತಯಾರಾಗಿದೆ. ಅದೇ ಖುರಾನ್ ಗ್ರಂಥ. ಈ ವಿಧವಾಗಿ ಪ್ರಥಮ, ದ್ವಿತೀಯ, ಅಂತಿಮ ಎನ್ನುವ ಹೆಸರುಗಳಿಂದ ವರಸೆಯಾಗಿ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳು ತಯಾರಾಗುವುದು ನಡೆದಿದೆ.

ಈ ಮೂರು ಗ್ರಂಥಗಳು ಪ್ರಪಂಚ ಇರುವವರೆಗು ಅದೇ ವರಸೆಯಲ್ಲಿ ಅದೇ ಹೆಸರಿನಿಂದ ಇರಬಲ್ಲವು. ಇವುಗಳ ಸ್ಥಾನಗಳೊಳಗೆ ಇತರ ಯಾವ ಗ್ರಂಥಗಳು ಬರುವುದಕ್ಕೆ ಸಾಧ್ಯವಿಲ್ಲ. ಆದರೆ ಇವುಗಳಲ್ಲಿ ಈಗಾಗಲೇ ಸ್ವಲ್ಪ ಕಲುಷಿತ ಜ್ಞಾನ ಸೇರಿಹೋಗಿ ಯಾರಿಗೂ ಕಾಣಿಸದಂತೆ ಇದೆ. ಅವು ಮೂರು ದೈವಗ್ರಂಥಗಳಾಗಿರುವುರಿಂದ ಅವುಗಳಲ್ಲಿ ಕೂಡಾ ಕಲುಷಿತ ಜ್ಞಾನ ಇರುತ್ತದಾ? ಎಂದು ಪ್ರಶ್ನೆ ಬರಬಹುದು. ಅದರ ಉತ್ತರ ಏನೆಂದರೆ! ದೇವರು ಪ್ರಪಂಚವೆಲ್ಲಾ

ಅಣುಅಣುವಿನಲ್ಲಿ ವ್ಯಾಪಿಸಿದ್ದಾನೆ. ದೇವರು ಸರ್ವವ್ಯಾಪಿ, ಸರ್ವಗ್ರಾಹಿ. ಆದುದರಿಂದ ಆತನು ಎಲ್ಲವನ್ನು ನೋಡುತ್ತಿದ್ದಾನೆ. ಎಲ್ಲವನ್ನು ಗ್ರಹಿಸಲ್ಪಡುತ್ತಿದ್ದಾನೆ. ಆತನಿಗೆ ತಿಳಿಯದೇ ಪ್ರಪಂಚದಲ್ಲಿ ಏನೂ ನಡೆಯುವುದಿಲ್ಲ. ಎಲ್ಲದಕ್ಕು ದೇವರು ಸಾಕ್ಷಿಯಾಗಿದ್ದಾನೆ. ಆತನು ಯಾವ ಕೆಲಸವನ್ನು ಮಾಡುವವನಲ್ಲ, ದೇವರು ಕೆಲಸ ಮಾಡುವವನಲ್ಲ, ಆದರೂ ಆತನು ಅಂದುಕೊಂಡರೆ ಎಲ್ಲಾ ಕೆಲಸಗಳು ನಡೆದುಹೋಗುತ್ತವೆ. ದೇವರು ನೋಡುತ್ತಿರುವಾಗ ಮಾಡಬೇಕಾದ ಕೆಲಸಗಳನ್ನು ದೇವರ ನಂತರ ಇರುವ ಆತ್ಮ ಮಾಡುತ್ತದೆ. ಆತ್ಮ ಮಾಡಿದರೂ ದೇವರು ಮಾಡಿದಂತೆ ಹೇಳಲ್ಪಡುತ್ತಿರುತ್ತದೆ. ಆತ್ಮ ಎಲ್ಲ ಕೆಲಸಗಳನ್ನು ಮಾಡಿದರೂ ತಾನು ಮಾಡಿದಂತೆ ಹೇಳದೆ, ದೇವರು ಮಾಡಿದ್ದಾನೆಂದೇ ಹೇಳುತ್ತಾನೆ. ಪರಮಾತ್ಮ (ದೇವರು) ಕ್ರಿಯೆಗಳು ಇಲ್ಲದವನು, ಆತ್ಮ ಕ್ರಿಯೆಗಳು ಮಾಡುವವನು. ಜೀವಾತ್ಮ ಏನು ಮಾಡಲಾಗದವನು. ಸ್ವಯಂ ಬಲ ಇಲ್ಲದವನು. ಏನು ಮಾಡುವುದಿಲ್ಲ ಎಲ್ಲ ಅನುಭವಿಸುತ್ತಾನೆ. **ಜೀವಾತ್ಮ ಅನುಭವಿಸುವವನು, ಆತ್ಮ ಮಾಡುವವನು, ಪರಮಾತ್ಮ ನೋಡುವವನು.** ಅಲ್ಲಾಹ್ ಅಥವಾ ದೇವರು ಮೂರು ಭಾಗಗಳಾಗಿದ್ದು ಎಲ್ಲಾ ತಾನೇ ಮಾಡುತ್ತಿದ್ದರೂ ಏನು ಮಾಡದವನಾಗಿ, ತನ್ನ ಆತ್ಮವನ್ನು ಮಾಡುವವನಾಗಿ ತೋರಿಸುತ್ತಿದ್ದಾನೆ.

ದೈವಗ್ರಂಥದಲ್ಲಿ ದೇವರು ಆತ್ಮ ಮೂಲಕ ಹೇಳಿಸಿದ ಸ್ವಚ್ಛವಾದ ಜ್ಞಾನವೂ ಇದೆ. ಹಾಗೆಯೇ ಜೀವಿಯನ್ನು ಅಡ್ಡ ಇಟ್ಟು ಆತ್ಮವೇ ಹೇಳಿದ ಅಜ್ಞಾನವೂ ಇದೆ. ಆದರೆ ಸ್ವಚ್ಛವಾದ ಜ್ಞಾನವನ್ನು ದೇವರು ಹೇಳಿದ್ದಾನೆಂದು, ಅಜ್ಞಾನವನ್ನು ಜೀವಿಯು ಹೇಳಿದ್ದಾನೆಂದು ಮೇಲ್ನೋಟಕ್ಕೆ ಆತ್ಮವೇ ಹೇಳುತ್ತಿರುತ್ತದೆ. ಎಲ್ಲಾ ಆತ್ಮವೇ ಮಾಡುತ್ತಿದ್ದರೂ, ಜ್ಞಾನವನ್ನು, ಅಜ್ಞಾನವನ್ನು ಆತ್ಮವೇ ಬೋಧಿಸುತ್ತಿದ್ದರೂ, ಆತ್ಮ ಬೋಧಿಸಿದಂತೆ ಯಾರಿಗೂ ತಿಳಿಯದಂತೆ ಆತ್ಮವೇ ಮಾಡಿದೆ. ಆತ್ಮ ಎಲ್ಲ ಕಾರ್ಯಗಳು ಮಾಡುತ್ತಿದ್ದರೂ ಯಾವುದು ಕಾಣಿಸದಂತೆ ಶರೀರದಲ್ಲಿ ಅಡಗಿ ಹೋಗುತ್ತಿದೆ. ದೈವಗ್ರಂಥದಲ್ಲಿ ಅಜ್ಞಾನವನ್ನು ಮನುಷ್ಯರ ಮೂಲಕ ಸೇರಿಸಿರುವುದು ಆತ್ಮವೇ. ಮನುಷ್ಯರನ್ನು ಗೊಂಬೆಗಳಂತೆ

ಆಡಿಸುತ್ತಾ, ಮನುಷ್ಯರಿಂದ ಅವರ ಅಜ್ಞಾನವನ್ನು ದೈವಗ್ರಂಥದಲ್ಲಿ ಸೇರಿಸಿದಂತೆ ಮಾಡಿರುವುದು ಆತ್ಮವೆಂದು ಯಾರಿಗೂ ತಿಳಿದಿಲ್ಲ. ದೇವರು ಜ್ಞಾನವನ್ನು ಹೇಳದಿದ್ದರೂ ದೇವರು ಹೇಳಿದಂತೆ ಯಾವ ವಿಧವಾಗಿ ಅಂದುಕೊಳ್ಳುತ್ತಿದ್ದೇವೊ, ಹಾಗೆಯೇ ಜೀವಿಯು ಅಜ್ಞಾನವನ್ನು ದೈವಗ್ರಂಥದಲ್ಲಿ ಸೇರಿಸದಿದ್ದರೂ ಜೀವಿಯು ಸೇರಿಸಿದಂತೆ ಅಂದುಕೊಳ್ಳುತ್ತಿದ್ದೇವೆ. ಎಲ್ಲರ ಹಿಂದೆ ಯಾರಿಗೂ ತಿಳಿಯದೇ ಎಲ್ಲಾ ಮಾಡುತ್ತಿರುವ ಆತ್ಮ ನಿಜವಾದ ಕಾರ್ಯಕರ್ತಯೆಂದು ತಿಳಿಯುತ್ತಿದೆ. ಹೇಗಾದರೇನು ದೈವ ಗ್ರಂಥದಲ್ಲಿ ಅಜ್ಞಾನ ಕಲುಷಿತ ಸ್ವಲ್ಪ ಸೇರಿಹೋಗಿದೆಯೆಂದು ಹೇಳದೆ ತಪ್ಪಲಿಲ್ಲ.

ಮೂರು ದೈವಗ್ರಂಥಗಳಲ್ಲಿ ದೈವಜ್ಞಾನ ಸಂಪೂರ್ಣವಾಗಿ ಇದ್ದರೂ, ಮನುಷ್ಯ ಜ್ಞಾನದಕಡೆ ಹೋಗದೆ ಅಜ್ಞಾನದಕಡೆ ಹೋಗುವುದಕ್ಕೆ, ಒಂದು ಜ್ಞಾನ ವಿಷಯವನ್ನು ಇದು ಜ್ಞಾನ ಅಲ್ಲವೆಂದು ತೀರಿಸುವುದಕ್ಕೆ, ಗ್ರಂಥದಲ್ಲಿನ ಅಜ್ಞಾನ ಚೆನ್ನಾಗಿ ಕೆಲಸಕ್ಕೆ ಬರುತ್ತದೆ. ಹಾಗೆ ದೇವರು ಏರ್ಪಡಿಸಿ ಇಟ್ಟಿರುವು ದರಿಂದ ಮನುಷ್ಯರೆಲ್ಲರೂ ದೈವಗ್ರಂಥಗಳ ಮೂಲಕ ಜ್ಞಾನದೊಳಗೆ ಪ್ರವೇಶಿಸದಂತೆ ಅಜ್ಞಾನದೊಳಗೆ ಪ್ರವೇಶಿಸುವುದಕ್ಕೆ ಅನುಕೂಲವಾಗಿ ಆತ್ಮವೇ ಮಾಡಿಟ್ಟಿದೆ. ಆದುದರಿಂದ ಬಹಳಜನ ದೈವಗ್ರಂಥಗಳನ್ನು ಓದಿದರೂ, ಅದರಲ್ಲಿ ಸ್ವಲ್ಪ ಜನರಿಗೆ ಮಾತ್ರವೇ ಅಪರೂಪವಾಗಿ ಜ್ಞಾನ ತಿಳಿಯುತ್ತದೆ. ಉಳಿದವರೆಲ್ಲರಿಗೂ ಅಜ್ಞಾನವೇ ಅರ್ಥವಾಗುತ್ತದೆ. “ದೇವರು ತನಗಿಷ್ಟವಾದವರೆಲ್ಲರನ್ನು ಜ್ಞಾನದಕಡೆ ಕಳಿಸುತ್ತಾನೆ. ತನಗೆ ಇಷ್ಟವಿಲ್ಲದವರನ್ನು ಅಜ್ಞಾನದ ಕಡೆ ಕಳಿಸುತ್ತಾನೆ” ಎಂದು ದೈವ ಗ್ರಂಥದಲ್ಲಿಯೇ ಹೇಳುವುದಾಗಿದೆ. ಹಾಗೆ ಮಾಡುವುದಕ್ಕೆ ಮೊದಲೇ ದೈವ ಗ್ರಂಥಗಳಲ್ಲಿ ಸ್ವಲ್ಪ ಅಜ್ಞಾನವನ್ನು ಅಜ್ಞಾನಿಗಳಿಗಾಗಿಯೇ ಇಟ್ಟಿದೆಯೆಂದು ತಿಳಿಯುತ್ತಿದೆ. ಹಾಗೆಂದು ಎಲ್ಲರೂ ಅಜ್ಞಾನಿಗಳಾಗುವುದಕ್ಕೆ ಸಾಧ್ಯವಿಲ್ಲ. ದೈವ ಗ್ರಂಥಗಳಲ್ಲಿ ಒಂದೊಂದರಲ್ಲಿ ಒಂದೊಂದು ವಿಧವಾಗಿ ಅಜ್ಞಾನ ಬೆರೆತಿದೆ. ಕಡಿಮೆ ಅಜ್ಞಾನವಿರುವ ಗ್ರಂಥ ನಮಗೆ ತಿಳಿದಿದೆ. ಹಾಗೆ ಹೆಚ್ಚಾಗಿ ಅಜ್ಞಾನವಿರುವ ಗ್ರಂಥ ನಮಗೆ ತಿಳಿದಿದೆ. ಆದರೂ ದೇವರಲ್ಲಿ ಎಷ್ಟು ಅಜ್ಞಾನ ಕಾಲುಷ್ಯ ಬೆರೆತಿದೆಯೆಂದು ನಾವು ಹೊರಗೆ ಹೇಳುವುದಿಲ್ಲ.

ಅಂತಹ ಕಲುಷಿತ ಜ್ಞಾನವನ್ನು ಬಿಟ್ಟು ಜ್ಞಾನವಿರುವ ವಾಕ್ಯಗಳನ್ನು ಮಾತ್ರ ಹೊರಗೆ ಹೇಳುತ್ತಾ ಅವುಗಳಿಗೆ ಇದು ವಿವರವೆಂದು ಹೇಳುತ್ತಿರುತ್ತೇವೆ. ಮೂರು ದೈವಗ್ರಂಥಗಳಲ್ಲಿ ಪ್ರಥಮ ದೈವ ಗ್ರಂಥಕ್ಕೆ ವಿವರವನ್ನು ಬರೆದಿದ್ದೇವೆ. **"ತ್ರೈತ ಸಿದ್ಧಾಂತ ಭಗವದ್ಗೀತೆ"** ಎನ್ನುವ ಹೆಸರಿನಿಂದ ನಾವು ಪ್ರಥಮ ಗ್ರಂಥಕ್ಕೆ ವಿವರವನ್ನು ಬರೆದಿದ್ದೇವೆ. ನಂತರ ಅಂತಿಮ ದೈವಗ್ರಂಥಕ್ಕೆ ಕೂಡಾ ಕೆಲವು ವಾಕ್ಯಗಳಿಗೆ ಮಾತ್ರ ವಿವರವನ್ನು ಬರೆದಿದ್ದೇವೆ. ನಂತರ ಅಂತಿಮ ದೈವ ಗ್ರಂಥದಲ್ಲಿನ ಜ್ಞಾನ ವಾಕ್ಯಗಳಿಗೆ ಎರಡನೆ ಭಾಗವಾಗಿ ಎರಡನೆ ಗ್ರಂಥವನ್ನು ಬರೆಯುತ್ತಿದ್ದೇವೆ. ಹೀಗೆ ಭಗವದ್ಗೀತೆ ಒಂದು, ಖುರಾನ್ ಎರಡು ಗ್ರಂಥಗಳು ಬರುತ್ತಿವೆ. ನಂತರ ದ್ವಿತಿಯ ದೈವಗ್ರಂಥದಲ್ಲಿನ ಕೆಲವು ಜ್ಞಾನ ವಾಕ್ಯಗಳಿಗೆ ಅಂದರೆ ನಾಲ್ಕು ಸುವಾರ್ತೆಗಳಿಗು ವಿವರವಾಗಿ ಗ್ರಂಥವನ್ನು ಬರೆಯಬೇಕೆಂದು ಕೊಂಡಿದ್ದೇವೆ. ಇಲ್ಲಿಗೆ ಎರಡು ಗ್ರಂಥಗಳಿಗು ಸ್ವಲ್ಪ ವಿವರವನ್ನು ಬರೆದರೂ, ಮೂರನೆ ಗ್ರಂಥದಿಂದ ನಾವು ಬರೆಯುವುದು ಪೂರ್ತಿ ಆಗುತ್ತದೆ. ಆ ಮೂರು ಗ್ರಂಥಗಳೇ ಅಲ್ಲದೆ ಅವುಗಳಿಗೆ ಅನುಬಂಧವಾಗಿರುವ 80 ಗ್ರಂಥಗಳನ್ನು ಬರೆಯುವುದು ನಡೆದಿದೆ. ಶೀಘ್ರದಲ್ಲಿಯೇ ನೂರು ಗ್ರಂಥಗಳನ್ನು ನನ್ನ ಆತ್ಮ ಬರೆಯುತ್ತದೆಯೆಂದು ನಂಬುತ್ತಿದ್ದೇನೆ. ಮೂರು ದೈವಗ್ರಂಥಗಳನ್ನು ಕುರಿತು ಎಷ್ಟು ಬರೆದರೂ, ಎಷ್ಟು ಹೇಳಿದರೂ ಕಡಿಮೆಯೇ ಆಗುತ್ತದೆ. ಆದ್ದರಿಂದ ಹೊಸ ಕೋನದಿಂದ ಮೂರು ಗ್ರಂಥಗಳನ್ನು ವಿವರಿಸಬೇಕೆಂದುಕೊಂಡು, ಮೂರು ದೈವಗ್ರಂಥಗಳಿಂದ ಮೂರು ಪ್ರಥಮ ವಾಕ್ಯಗಳನ್ನು ತೆಗೆದು, ಮೂರು ಪ್ರಥಮ ವಾಕ್ಯಗಳಿಗೆ ಪ್ರತ್ಯೇಕಿಸಿ ಜ್ಞಾನ ವಿವರವನ್ನು ತಿಳಿಸಬೇಕೆಂದುಕೊಂಡಿದ್ದೇವೆ. ಆ ಪ್ರಯತ್ನದಲ್ಲಿಯೇ ಈ ಚಿಕ್ಕ ಗ್ರಂಥವನ್ನು ಬರೆಯುತ್ತಿದ್ದೇನೆ ಎಂದು ನಾನು ಹೇಳುವುದಿಲ್ಲ. ನನ್ನ ಹಿಂದೆ ಕಾಣಿಸದೆ ಅಡಗಿರುವ ಆತ್ಮ ಬರೆಯಿಸುತ್ತಿದೆಯೆಂದು ಹೇಳುತ್ತಿದ್ದೇನೆ.

ಮೊದಲನೆಯದಾಗಿ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ತೆಗೆದುಕೊಳ್ಳೋಣ. ಭಗವದ್ಗೀತೆ ಒಟ್ಟು 18 ಅಧ್ಯಾಯಗಳಾಗಿ ಇದೆ. ಅದರಲ್ಲಿ

ಅರ್ಜುನ ವಿಷಾದಯೋಗ ಒಂದು ಅಧ್ಯಾಯವಾಗಿದ್ದು, ಅದು 47 ಶ್ಲೋಕಗಳಿಂದ ಕೂಡಿಕೊಂಡಿದೆ. ಎರಡನೆ ಅಧ್ಯಾಯ ಸಾಂಖ್ಯ ಯೋಗ. ಈ ಅಧ್ಯಾಯ 72 ಶ್ಲೋಕಗಳಾಗಿ ಇದೆ. ಅದರಲ್ಲಿ ಹತ್ತು ಶ್ಲೋಕಗಳು ಅರ್ಜುನನು ಹೇಳಿರುವವೇ ಆಗಿರುವುದರಿಂದ ಒಟ್ಟು ಅರ್ಜುನ ವಿಷಾದ ಶ್ಲೋಕಗಳು 47+10=57 ಆಗುತ್ತಿವೆ. ಸಾಂಖ್ಯಯೋಗದಲ್ಲಿ ಹತ್ತು ಶ್ಲೋಕಗಳು ಅರ್ಜುನನವು ಹೋದರೆ ಉಳಿದಿರುವವು 72–10=62 ಮಾತ್ರವೇ. ಸಾಂಖ್ಯಯೋಗದಲ್ಲಿ 11ನೇ ಶ್ಲೋಕದಿಂದ ಭಗವಂತನಾದ ಕೃಷ್ಣನು ಹೇಳಿದ ಶ್ಲೋಕಗಳು ಇವೆ. ಅದರ ಪ್ರಕಾರ ಭಗವದ್ಗೀತೆ ಸಾಂಖ್ಯ ಯೋಗದಲ್ಲಿ (ಎರಡನೆ ಅಧ್ಯಾಯದಲ್ಲಿ) 11ನೇ ಶ್ಲೋಕದಿಂದ ಪ್ರಾರಂಭವಾಗಿದೆ ಯೆಂದು ಹೇಳಬಹುದು. ದೈವ ಗ್ರಂಥದಲ್ಲಿ ಮೊದಲು ಹೇಳಿದ ಮೂರು ವಾಕ್ಯಗಳನ್ನು ಮುಖ್ಯವಾಗಿ ತೆಗೆದುಕೊಂಡು ನೋಡಬೇಕು. ಏಕೆಂದರೆ! ಮೂರು ದೈವ ಗ್ರಂಥಗಳ ಮೊದಲ ಮೂರು ವಾಕ್ಯಗಳು ಮುಖ್ಯವಾದವುಗಳಾಗಿ ಇರುತ್ತವೆಯೆಂದು ಒಂದು ಸೂತ್ರದ ಪ್ರಕಾರ ಹೇಳಬಹುದು. ಮೂರು ಗ್ರಂಥಗಳಲ್ಲಿಯೂ ಮುಖ್ಯವಾದ ಸಾರಾಂಶವಾಗಿ ಮೂರು ಆತ್ಮಗಳನ್ನು ಕುರಿತು ಹೇಳಿರುವುದೇ ಇದೆ. ಅಂದರೆ ಮೂರು ದೈವಗ್ರಂಥಗಳಲ್ಲಿಯೂ ಸೂಕ್ಷ್ಮವಾದ ಅಗೋಚರ ಆತ್ಮಗಳನ್ನು ಕುರಿತು ಹೇಳಿರುವುದೇ ಇದೆ. ತ್ರಿ ಆತ್ಮಗಳನ್ನು ಕುರಿತು ಹೇಳಿದ ತ್ರೈತ ಸಿದ್ಧಾಂತ ಮೂರು ಗ್ರಂಥಗಳಲ್ಲಿ ಇರುವಂತೆ ತಿಳಿಯುತ್ತಿದೆ. ತ್ರೈತ ಸಿದ್ಧಾಂತದ ಪ್ರಕಾರ ಮೂರು ಆತ್ಮಗಳನ್ನು ಕುರಿತು ಹೇಳಿದ ಪ್ರತಿ ಗ್ರಂಥದಲ್ಲಿ ಮೊದಲು ಬರೆಯಲಾದ ಮೂರು ವಾಕ್ಯಗಳು ದೊಡ್ಡ ಸಾರಾಂಶವನ್ನು ಹೊಂದಿರುತ್ತವೆಂದು ನಾವು ಅಂದುಕೊಂಡಿದ್ದೇವೆ. ನಾವು ಅಂದುಕೊಂಡಿರುವ ಪ್ರಕಾರ ಮೂರು ಗ್ರಂಥಗಳ ಮೊದಲ ಮೂರು ವಾಕ್ಯಗಳನ್ನು ನೋಡಿದ್ದೇವೆ. ಪ್ರಥಮ ದೈವಗ್ರಂಥ, ದ್ವಿತೀಯ ದೈವ ಗ್ರಂಥ, ಅಂತಿಮ ದೈವಗ್ರಂಥಗಳಲ್ಲಿ ತ್ರಿ ಆತ್ಮಗಳನ್ನು ಹೇಳಿದ ತ್ರೈತ ಸಿದ್ಧಾಂತ ಇದೆ. ಆದುದರಿಂದ ಆ ಗ್ರಂಥಗಳಲ್ಲಿ ಮೊದಲ ಮೂರು ವಾಕ್ಯಗಳು ವಿಶೇಷವಾದ ಜ್ಞಾನವನ್ನು ಹೊಂದಿರುತ್ತವೆ ಎನ್ನುವ ನಮ್ಮ ಅಂದಾಜಿನ ಪ್ರಕಾರ ಮೂರು ಗ್ರಂಥಗಳ ಮೊದಲ ಮೂರು ವಾಕ್ಯಗಳು ದೊಡ್ಡದಾಗಿಯೇ ಇರುವಂತೆ ಕಾಣಿಸಿವೆ.

ಆದರೆ ಮೂರು ಗ್ರಂಥಗಳ ಮೊದಲ ಮೂರು ವಾಕ್ಯಗಳನ್ನು ಜಾಗ್ರತೆಯಾಗಿ ಗುರುತಿಸಬೇಕಾಗಿದೆ. ಇಲ್ಲದಿದ್ದರೆ ಮೊದಲ ಮೂರು ವಾಕ್ಯಗಳನ್ನು ಗುರುತಿಸದೆ ಬೇರೆ ವಾಕ್ಯಗಳನ್ನು ನೋಡುತ್ತಾರೆ. ಭಗವದ್ಗೀತೆಯಲ್ಲಿ ಸಿಕ್ಕುತೆಗೆದು ನೋಡಿದರೆ ಸಾಂಖ್ಯ ಯೋಗ 11, 12, 13ನೇ ಶ್ಲೋಕಗಳಲ್ಲಿ ಮೂರು ಪ್ರಥಮ ವಾಕ್ಯಗಳಿರುವಂತೆ ತಿಳಿದಿದೆ. ಭಗವದ್ಗೀತೆಯಲ್ಲಿ ಪ್ರಾರಂಭದಿಂದ 57 ಶ್ಲೋಕಗಳ ನಂತರ 58ನೇ ಶ್ಲೋಕದಿಂದ ಗ್ರಂಥ ಒಂದರ ಮೊದಲ ಮೂರು ವಾಕ್ಯಗಳು ದೊರೆತಿವೆ. ಪ್ರಥಮ ದೈವಗ್ರಂಥದಲ್ಲಿ ಪ್ರಥಮ ವಾಕ್ಯಗಳನ್ನು ಮೂರನ್ನು ತಿಳಿಯುವುದಕ್ಕೆ ಎಷ್ಟು ಕಷ್ಟವಾಗಿದೆಯೋ, ಹಾಗೆಯೇ ಉಳಿದ ಎರಡು ಗ್ರಂಥಗಳಲ್ಲಿ ಪ್ರಥಮ ವಾಕ್ಯಗಳನ್ನು ತಿಳಿಯುವುದು ಬಹಳ ಕಷ್ಟವಾದ ವಿಷಯವೇ. ಆದುದರಿಂದ ಮೊದಲೇ ಅವುಗಳ ವಿವರವನ್ನು ತಿಳಿದು, ಉಳಿದ ಎರಡು ಗ್ರಂಥಗಳಲ್ಲಿಯೂ ಮೊದಲ ವಾಕ್ಯಗಳನ್ನು ಜಾಗ್ರತೆಯಾಗಿ ತಿಳಿಯಬೇಕಾಗಿದೆ. ಭಗವದ್ಗೀತೆಯಲ್ಲಿ ಸ್ವಲ್ಪ ಅನ್ವೇಷಣೆ ಮಾಡಿದ ನಂತರ ಮೊದಲ 57 ಶ್ಲೋಕಗಳನ್ನು ಬಿಟ್ಟುಹಾಕಿದರೆ, 58ನೇ ಶ್ಲೋಕದಿಂದ ಮೊದಲ ಮೂರು ವಾಕ್ಯಗಳು ಕಾಣಿಸುತ್ತಿವೆ. 58, 59, 60 ಅಂದರೆ! ಸಾಂಖ್ಯಯೋಗದಲ್ಲಿ 11, 12, 13 ಶ್ಲೋಕಗಳಲ್ಲಿ ಮೂರು ಮುಖ್ಯವಾದ ವಾಕ್ಯಗಳು ತಿಳಿಯುತ್ತಿವೆ.

ಅದೇ ವಿಧವಾಗಿ ದ್ವಿತಿಯ ದೈವ ಗ್ರಂಥವಾದ ಇಂಜೀಲ್‌ನಲ್ಲಿ (ಬೈಬಲ್ ಗ್ರಂಥದಲ್ಲಿ) 66 ಪಾಠಗಳಲ್ಲಿ ಕೇವಲ ನಾಲ್ಕು ಪಾಠಗಳನ್ನು ನಾಲ್ಕು ಸುವಾರ್ತೆಗಳಾಗಿ ಹೇಳುತ್ತಿದ್ದೇವೆ. ಮುಖ್ಯವಾದ ಈ ನಾಲ್ಕು ಸುವಾರ್ತೆಗಳಲ್ಲಿಯೇ ದೇವರ ಜ್ಞಾನ ಸ್ವಚ್ಛವಾಗಿ ಇದೆಯೆಂದು ಹೇಳಿದ್ದೇವೆ. ಈ ನಾಲ್ಕು ಸುವಾರ್ತೆ ಗಳಲ್ಲಿಯೇ ದೈವ ಜ್ಞಾನ ಪ್ರಾರಂಭವಾಗಿದೆಯೆಂದು, ನಾಲ್ಕು ಸುವಾರ್ತೆಗಳಲ್ಲಿಯೇ ಭಗವಂತನಾದ ಯೇಸು ಮಾತನಾಡಿದ ಮಾತುಗಳು ಇವೆಯೆಂದು ಹೇಳಿಕೊಂಡಿದ್ದೇವೆ. ಆದುದರಿಂದ ಭಗವಂತನು ಹೇಳಿದ ಮಾತುಗಳಿಂದಲೇ ಬೈಬಲ್ ಜ್ಞಾನ ಪ್ರಾರಂಭವಾಗುತ್ತದೆ. ನಾಲ್ಕು ಸುವಾರ್ತೆಗಳಲ್ಲಿ ಯಾವ ಸುವಾರ್ತೆಯಲ್ಲಿ ಜ್ಞಾನ ಪ್ರಾರಂಭವಾಗಿದೆಯೋ ಗಮನಿಸಬೇಕಾಗಿದೆ. ಹಾಗೆ

ಗಮನಿಸುತ್ತಾ ಹೋದರೆ ಯೋಹಾನ್ ಸುವಾರ್ತೆಯಲ್ಲಿ ದೇವರು ಹೇಳಿದ ಜ್ಞಾನ ಪ್ರಾರಂಭವಾಗಿದೆಯೆಂದು ತಿಳಿಯುತ್ತಿದೆ. ಪ್ರಥಮ ದೈವ ಗ್ರಂಥದಲ್ಲಿ ಮೂರು ಶ್ಲೋಕಗಳಲ್ಲಿ ಮೂರು ವಾಕ್ಯಗಳಿರುವಾಗ, ದ್ವಿತೀಯ ದೈವಗ್ರಂಥದಲ್ಲಿ ಒಂದೇ ವಾಕ್ಯದಲ್ಲಿಯೇ ಮೂರು ಮುಖ್ಯವಾದ ವಾಕ್ಯಗಳು ಇವೆಯೆಂದು ತಿಳಿಯುತ್ತಿದೆ. ಬೈಬಲ್ ಮಧ್ಯ ಭಾಗದಲ್ಲಿರುವ ನಾಲ್ಕು ಸುವಾರ್ತೆಗಳಲ್ಲಿ ಒಂದರಲ್ಲಿ ಮೂರು ಪ್ರಥಮ ವಾಕ್ಯಗಳಿರುವಂತೆ ತಿಳಿದಿದೆ. ಬೈಬಲ್ ಹಳೆ ನಿಬಂಧನೆಯಲ್ಲಿನ 39 ಪಾಠಗಳನ್ನು ಬಿಟ್ಟುಹಾಕಿದರೆ, ನಾಲ್ಕು ಸುವಾರ್ತೆಗಳಲ್ಲಿ ಹೊಸ ನಿಬಂಧನೆಯಲ್ಲಿ ಮೊದಲಿರುವ ಮೂರು ಸುವಾರ್ತೆಗಳನ್ನು ಮತ್ತಾಯ, ಮಾರ್ಕ, ಲೂಕಾ ಸುವಾರ್ತೆಗಳನ್ನು ಬಿಟ್ಟು ನಾಲ್ಕನೇ ಸುವಾರ್ತೆಯಾದ ಯೋಹಾನ್ ಸುವಾರ್ತೆ ಮೊದಲಿನಲ್ಲಿಯೇ ಮೊದಲ ಮೂರು ಸಾರಾಂಶ ವಾಕ್ಯಗಳು ಇವೆ.

ಈ ವಿಧವಾಗಿ ಗ್ರಂಥದಲ್ಲಿ ಆಳವಾಗಿ ಹುಡುಕಿದರೆ ಹೊರತು ಪ್ರಾರಂಭ ವಾಕ್ಯಗಳು ಕಾಣಿಸುವುದಿಲ್ಲ. ಭಗವದ್ಗೀತೆಯಲ್ಲಿ ಒಂದು ಅಧ್ಯಾಯವನ್ನು ಬಿಟ್ಟು ಎರಡನೆ ಅಧ್ಯಾಯದಲ್ಲಿ ನೋಡಿದಾಗ ಪ್ರಾರಂಭ ವಾಕ್ಯಗಳು ದೊರೆತಿವೆ. ಹಾಗೆ ಬೈಬಲ್‌ನಲ್ಲಿ 39 ಹಳೆ ನಿಬಂಧನ ಪಾಠಗಳನ್ನು ಬಿಟ್ಟು ಹೊಸ ನಿಬಂಧನೆಯಲ್ಲಿ ಮೂರು ಸುವಾರ್ತೆಗಳ ನಂತರ ನಾಲ್ಕನೆ ಸುವಾರ್ತೆಯಲ್ಲಿ ನೋಡಿದಾಗ ಪ್ರಾರಂಭ ವಾಕ್ಯಗಳು ಮೂರು ದೊರೆತಿವೆ. ಇನ್ನೂ ಅಂತಿಮ ದೈವಗ್ರಂಥದಲ್ಲಿ ನೋಡಬೇಕಾದ ಅಗತ್ಯವಿದೆ. ಅಂತಿಮ ದೈವ ಗ್ರಂಥ ಖುರಾನ್‌ನಲ್ಲಿ ಕೂಡಾ ಪ್ರಥಮ ವಾಕ್ಯಗಳನ್ನು ಹುಡುಕಬೇಕಾಗಿದೆ. ಖುರಾನ್ ಗ್ರಂಥದಲ್ಲಿ ಒಟ್ಟು 114 ಸೂರಾಗಳು ಇವೆ. ಆ ಸೂರಾಗಳಲ್ಲಿ ಒಟ್ಟು 6236 ಆಯತ್‌ಗಳೆನ್ನುವ ವಾಕ್ಯಗಳು ಇವೆ. ಖುರಾನ್‌ನಲ್ಲಿ ಮೊದಲ ಸೂರಾ ಹೆಸರು "ಅಲ್ ಫಾತಿಹಾ". ಕೃಷ್ಣನಿಗು ಅರ್ಜುನನಿಗು ನಡೆದ ಸಂವಾದವಾಗಿ ಭಗವದ್ಗೀತೆ ಇದೆ. ಕೃಷ್ಣನು ಭಗವದ್ಗೀತೆ ಜ್ಞಾನವನ್ನು ಹೇಳಿದಾಗ ಅರ್ಜುನನು ಆಲಿಸುವುದು ನಡೆದಿದೆ. ಕೃಷ್ಣನು ಅರ್ಜುನಾ! ಕೇಳು ಎಂದು ತನ್ನ ಬೋಧನೆಯನ್ನು ಅರ್ಜುನನಿಗೆ ಹೇಳಿದಂತೆ ಕಲಿಯುಗದಲ್ಲಿ 1400 ವರ್ಷಗಳ ಕೆಳಗೆ ಜಿಬ್ರಯೇಲ್ ಎನ್ನುವಾತನು ಮುಹಮ್ಮದ್ ಪ್ರವಕ್ತರಿಗೆ

ಖುರಾನ್ ಗ್ರಂಥವೊಂದರ ಜ್ಞಾನವನ್ನು ಬೋಧಿಸಿದ್ದಾನೆ. ಸೃಷ್ಟಿ ಆದಿಯಲ್ಲಿ ಆಕಾಶವಾಣಿ ಬೋಧನೆಯನ್ನು ಆಕಾಶದಲ್ಲಿನ ಸೂರ್ಯನು ಕೇಳಿಸಿಕೊಂಡಿದ್ದಾನೆ. ಮೇಘಗಳ ಗರ್ಜನೆ ರೂಪದಲ್ಲಿ ಹೇಳಿದ ಶಬ್ದರೂಪ ಜ್ಞಾನವನ್ನು ಸೂರ್ಯಗ್ರಹ ಗ್ರಹಿಸಲ್ಪಟ್ಟು, ತನಗೆ ತಿಳಿದಜ್ಞಾನವನ್ನು ಮನುಷ್ಯರ ಭಾಷೆಯೊಳಗೆ ಅನುವಾದ ಮಾಡಿ ಸೂರ್ಯನು ಭೂಮಿಮೇಲೆ ಮನುವಿಗೆ ಹೇಳುವುದು ನಡೆದಿದೆ. ಐದುಸಾವಿರ ವರ್ಷಗಳ ಪೂರ್ವದಲ್ಲಿ ಸೂರ್ಯನು ಹೇಳಿದ ಜ್ಞಾನವನ್ನೇ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ಆಗ ಅದು ಮೊದಲ ಗ್ರಂಥವಾಗಿ ವ್ಯಾಸನಿಂದ ತಯಾರಾಗಿದೆ. ಮೊದಲು ಕೃತಯುಗದಲ್ಲಿ ಸೂರ್ಯನು ಭೂಮಿಮೇಲಿರುವ ಮನುವಿಗೆ ಜ್ಞಾನ ಹೇಳಿದಂತೇ, ಕಲಿಯುಗದಲ್ಲಿ ಕೂಡಾ ಅದೇ ಸೂರ್ಯನೇ ಜಿಬ್ರಯೇಲ್ ಎನ್ನುವ ಹೆಸರಿನಿಂದ ಮುಹಮ್ಮದ್ ಪ್ರವಕ್ತರಿಗೆ ಭೂಮಿಮೇಲಕ್ಕೆ ಬಂದು ತನಗೆ ತಿಳಿದ ಜ್ಞಾನವನ್ನು ಹೇಳಿದ್ದಾನೆ. ಮೊದಲು ಕೃತಯುಗದಲ್ಲಿ ಹೇಳಿದ ಜ್ಞಾನ ನಂತರ ದ್ವಾಪರಯುಗದ ಕೊನೆಯಲ್ಲಿ ಭಗವದ್ಗೀತೆಯೆನ್ನುವ ಪ್ರಥಮ ದೈವ ಗ್ರಂಥವಾಗಿದೆ. ಹಾಗೆಯೇ ಕಲಿಯುಗದಲ್ಲಿ ಜಿಬ್ರಯೇಲ್ ಎನ್ನುವ ಹೆಸರಿನಿಂದ ಮುಹಮ್ಮದ್ ಪ್ರವಕ್ತರಿಗೆ ಹೇಳಿದ ಜ್ಞಾನ ಅಂತಿಮ ದೈವ ಗ್ರಂಥವಾಗಿ ತಯಾರಾಗಿದೆ.

ಅಂತಿಮ ದೈವ ಗ್ರಂಥವನ್ನು ಸೂರ್ಯನೇ ಬದಲಿ ಹೆಸರಿನಿಂದ ಹೇಳಿದ್ದರೂ, ಹೇಳಲ್ಪಟ್ಟ ಜ್ಞಾನ ಒಂದೇ ಜ್ಞಾನವಾದರೂ, ಅದು ಅಂತಿಮ ದೈವ ಗ್ರಂಥವೆನ್ನುವ ಹೆಸರಿನಿಂದ ತಯಾರಾಗಿದೆ. ಓ ಅರ್ಜುನಾ ಕೇಳು! ಎಂದು ಕೃಷ್ಣನು ಅರ್ಜುನನಿಗೆ ಹೇಳಿದಂತೆ, ಖುರಾನ್ ಗ್ರಂಥದಲ್ಲಿ ಓ ಪ್ರವಕ್ತಾ ಕೇಳು! ಎಂದು ಜಿಬ್ರಯೇಲ್ ಪ್ರವಕ್ತನಿಗೆ ಜ್ಞಾನವನ್ನು ಹೇಳಿದ್ದಾನೆ. ಆದರೆ ಹೇಳಿದ ವಿಧಾನವನ್ನನುಸರಿಸಿ, ವಿಧಾನವೊಂದರ ವರಸೆ ಕ್ರಮವನ್ನನುಸರಿಸಿ ಖುರಾನ್ ಗ್ರಂಥವನ್ನು ಅಂತಿಮ ದೈವ ಗ್ರಂಥ ಎಂದು ಹೇಳುತ್ತಿದ್ದೇವೆ. ಖುರಾನ್‌ಗಿಂತ ಮೊದಲು ಆಕಾಶವಾಣಿ ಹೇಳಿದ ಜ್ಞಾನವೇ ಎರಡು ಗ್ರಂಥಗಳಾಗಿ ಬಂದಿದೆ. ಕೊನೆಯಲ್ಲಿ ಅದೇ ಜ್ಞಾನವೇ ಅಂತಿಮ ದೈವಗ್ರಂಥವೆನ್ನುವ ಹೆಸರಿನಿಂದ

ಬಂದರೂ, ಮೊದಲು ತಯಾರಾದ ಉಳಿದ ಎರಡು ಗ್ರಂಥಗಳಿಗಿಂತ ಸ್ವಲ್ಪ ವಿಭಿನ್ನವಾಗಿ ತಯಾರಾಗಿದೆಯೆಂದೇ ಹೇಳಬಹುದು. ಮೊದಲು ಬಂದ ಗ್ರಂಥ ಜ್ಞಾನವೇ ಖುರಾನ್ ಗ್ರಂಥದಲ್ಲಿ ಇದ್ದರೂ ಇದರಲ್ಲಿ ಹೇಳಿದ ಜ್ಞಾನ ವಾಕ್ಯಗಳು ಬಹಳ ನಿಗೂಢವಾಗಿ ಇವೆ. ಎಷ್ಟು ದೊಡ್ಡ ಜ್ಞಾನಿಗಾದರೂ ಸುಲಭವಾಗಿ ಅರ್ಥವಾಗುವುದಿಲ್ಲ. ಸುಮಾರು ಶೇಕಡ ಅರವತ್ತರಷ್ಟು ಅರ್ಥವಾಗದ ನಿಗೂಢ ವಾಕ್ಯಗಳು ಖುರಾನ್ ಗ್ರಂಥದಲ್ಲಿ ಇವೆಯೆಂದು ಹೇಳಬಹುದು. ಭಗವದ್ಗೀತೆಯಲ್ಲಿ ಸ್ವಲ್ಪ ಮಟ್ಟಿಗೆ ಕಷ್ಟವಾಗಿ ಅರ್ಥವಾಗುವ ವಾಕ್ಯಗಳಿರುವಾಗ, ಭಗವದ್ಗೀತೆ ನಂತರ ಖುರಾನ್ ಗ್ರಂಥದಲ್ಲಿ ಇನ್ನೂ ಹೆಚ್ಚಾಗಿ ನಿಗೂಢವಾದ ವಿಷಯಗಳು ಇವೆ. ಭಗವದ್ಗೀತೆಯಲ್ಲಿ ಹೇಳಿದ ಜ್ಞಾನ ಖುರಾನ್‌ನಲ್ಲಿ ಹೇಳಿದ ಜ್ಞಾನ ಎರಡು ಒಂದೇ ಆದರೂ, ಎರಡೂ ಒಂದೇಯೆಂದು ಯಾರಿಗೂ ಅರ್ಥವಾಗುವುದಿಲ್ಲ. ಒಂದೇ ಜ್ಞಾನವೇ ಬರೆದ ವಿಧಾನವನ್ನನುಸರಿಸಿ ಬೇರೆಯಾಗಿ ಕಾಣಿಸುತ್ತಿದೆ. ಹಾಗೆ ಅದೇ ಜ್ಞಾನವೇ ಖುರಾನ್‌ನಲ್ಲಿ ಅರ್ಥವಾಗದಂತೆ ಸೂಕ್ಷ್ಮದಿಂದ ಕೂಡಿಕೊಂಡಿರುತ್ತದೆ.

ಭಗವದ್ಗೀತೆ ಅರ್ಜುನ ವಿಷಾದಯೋಗದಿಂದ ಆರಂಭವಾಗಿದೆ. ಖುರಾನ್ ಗ್ರಂಥ "ಅಲ್ ಫಾತಿಹ" ಸೂರಾದಿಂದ ಆರಂಭವಾಗಿದೆ. ಭಗವದ್ಗೀತೆ ಅರ್ಜುನ ವಿಷಾದಯೋಗದಿಂದ ಆರಂಭವಾದರೂ ಮೊದಲ ಅಧ್ಯಾಯ ಭಗವದ್ಗೀತೆಗೆ ಸಂಬಂಧವಿಲ್ಲವೆಂದು ಹೇಳಿದ್ದೇವೆ. ಭಗವದ್ಗೀತೆ ಸಾಂಖ್ಯಯೋಗ ಎನ್ನುವ ಎರಡನೆ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕದಿಂದ ಪ್ರಾರಂಭವಾಗಿದೆ. ಖುರಾನ್ ಗ್ರಂಥ ಕೂಡಾ ಸುಮಾರು ಅದೇ ವಿಧವಾಗಿ ಇದೆಯೆಂದು ಹೇಳಬಹುದು. ಖುರಾನ್ ಗ್ರಂಥದಲ್ಲಿ ಜಿಬ್ರಯೇಲ್ ಜ್ಞಾನ ಎಲ್ಲಿ ಶುರುಮಾಡಿ ಹೇಳಿರುತ್ತದೊ ಅದೇ ಪ್ರಾರಂಭವೆಂದು ಹೇಳಬಹುದು. ಅಲ್ ಫಾತಿಹ ಎನ್ನುವ ಮೊದಲ ಸೂರಾ ಖುರಾನ್ ಗ್ರಂಥದಲ್ಲಿ ಮೊದಲಿಗೇ ಇದ್ದರೂ ಅದರಲ್ಲಿ ಜಿಬ್ರಯೇಲ್ ಹೇಳಿದ ಜ್ಞಾನ ಇಲ್ಲ. ಅದರಲ್ಲಿ ಮೊದಲು ಅಲ್ಲಾಹ್‌ನನ್ನು (ದೇವರನ್ನು) ಪ್ರಾರ್ಥನೆ ಮಾಡುವುದು ಇದೆ. ಪ್ರಾರ್ಥನೆ ಮನುಷ್ಯರು ಮಾಡುವುದು. ಮನುಷ್ಯರು ತಿಳಿಯುವುದು ಜ್ಞಾನ. ತಿಳಿದ ಜ್ಞಾನದಿಂದ ದೇವರನ್ನು

ಬೇಡಿಕೊಳ್ಳುವುದು ಪ್ರಾರ್ಥನೆ. ಜ್ಞಾನ ತಿಳಿದ ನಂತರ ಮನುಷ್ಯರು ದೇವರ ಬಗ್ಗೆ ತೋರಿಸುವ ವಿಧೇಯತೆಯನ್ನು ಪ್ರಾರ್ಥನೆ ಎನ್ನುತ್ತೇವೆ. ಜ್ಞಾನ ತಿಳಿಯದಮುನ್ನ ದೇವರ ಮೇಲೆ ಭಕ್ತಿ ಬರುವುದಿಲ್ಲ. ಆದುದರಿಂದ ಪ್ರಾರ್ಥನೆ ಖುರಾನ್ ಗ್ರಂಥವೊಂದರ ಪ್ರಾರಂಭ ಅಲ್ಲ. ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಎಲ್ಲಿಂದ ಜ್ಞಾನವನ್ನು ಹೇಳಿದ್ದಾನೊ ಅಲ್ಲಿಂದ ಗ್ರಂಥ ಪ್ರಾರಂಭವಾಗಿ ಲೆಕ್ಕಿಸಲ್ಪಡುತ್ತದೆ.

ಆ ವಿಧವಾಗಿ ನೋಡಿದರೆ ಮೊದಲ ಸೂರಾ ಎಲ್ಲವೂ ದೇವರ ಪ್ರಾರ್ಥನೆಯಿಂದ ಕೂಡಿಕೊಂಡ ಏಳು ಆಯತ್‌ಗಳು ಇವೆ. ಈ ಮೊದಲ ಸೂರಾ ಒಟ್ಟು ಏಳು ಆಯತ್‌ಗಳನ್ನು ಬಿಟ್ಟರೆ ಎರಡನೆ ಸೂರಾದಲ್ಲಿ ಪ್ರವೇಶಿಸಬೇಕಾಗಿದೆ. ಅಲ್‌ಬಖರ ಎನ್ನುವ ಸೂರಾದಿಂದ ಜ್ಞಾನ ಆರಂಭವಾಗಿದೆ. ಎರಡನೆ ಸೂರಾದಲ್ಲಿ ಮೊದಲ ವಾಕ್ಯದಲ್ಲಿ ಜ್ಞಾನ ಹೇಳಲಿಲ್ಲ. ಎರಡನೆ ವಾಕ್ಯದಿಂದ ದೇವರ ಜ್ಞಾನ ಆರಂಭವಾಗುತ್ತಿದೆ. ಆದುದರಿಂದ ಎರಡನೆ ಸೂರಾದಲ್ಲಿ 2, 3, 4 ವಾಕ್ಯಗಳು (ಆಯತ್‌ಗಳು) ಖುರಾನ್ ಗ್ರಂಥದಲ್ಲಿ ಪ್ರಾರಂಭ ವಾಕ್ಯಗಳೆಂದು ಹೇಳಬಹುದು. ಅಂತಿಮ ಗ್ರಂಥದಲ್ಲಿ ಪ್ರಥಮ ವಾಕ್ಯಗಳು ಮೂರು ತೆಗೆದು ನೋಡಿದರೆ, ಆ ಮೂರು ವಾಕ್ಯಗಳು ಬಹಳ ದೊಡ್ಡ ಭಾವನೆಯಿಂದ ಕೂಡಿಕೊಂಡಿವೆ. ಪ್ರಥಮ ದೈವಗ್ರಂಥದಲ್ಲಿನ ಪ್ರಾರಂಭ ವಾಕ್ಯಗಳು ಬೇರೆಯಾಗಿವೆ. ಹಾಗೆಯೇ ದ್ವಿತೀಯ ದೈವಗ್ರಂಥದಲ್ಲಿನ ಮೊದಲ ಮೂರು ವಾಕ್ಯಗಳು ಪ್ರತ್ಯೇಕವಾಗಿವೆ. ಕೊನೆಯ ಖುರಾನ್ ಗ್ರಂಥದಲ್ಲಿ ಕೂಡಾ ಮೊದಲ ವಾಕ್ಯಗಳು ಮೂರು ಉಳಿದ ಎರಡು ಗ್ರಂಥಗಳಿಗಿಂತ ಭಿನ್ನವಾಗಿ ಇವೆ.

ಪ್ರಥಮ ದೈವಗ್ರಂಥ ತೌರಾತು ಅಥವಾ ಭಗವದ್ಗೀತೆಯಲ್ಲಿನ ಮೊದಲ ಮೂರು ಶ್ಲೋಕಗಳ ಭಾವನೆಗಳನ್ನು ಈಗ ನೋಡೋಣ.

**ಶ್ಲೋ॥ 11.** **ಅಶೋಚ್ಯಾ ನನ್ವ ಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ।**
**ಗತಾಸೂ ನಗತಾ ಸೂಂಶ್ಚ ನಾನುಶೋಚನ್ತಿ ಪಂಡಿತಾಃ ॥**

**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ :–** ಶೋಕಿಸಬಾರದ್ದನ್ನು ಕುರಿತು ನೀನು ಶೋಕಿಸುತ್ತಿದ್ದೀಯಾ. ಮತ್ತು ನಿನ್ನ ಪ್ರಜ್ಞೆ(ಬುದ್ಧಿ) ಯನ್ನೆಲ್ಲ ಉಪಯೋಗಿಸಿ ಮಾತನಾಡುತ್ತಿದ್ದೀಯಾ. ಪಂಡಿತರು ಗತಿಗಳೊಂದಿರುವ ಮತ್ತು ಗತಿಗಳಿಲ್ಲದವುಗಳನ್ನು ಕುರಿತು ಬಾಧೆಪಡುವುದಿಲ್ಲ.

**ವಿವರ :–** ಬಾಧೆಪಡದಂಥಹ ವಿಷಯವನ್ನು ಕುರಿತು ಬಾಧೆಪಡುತ್ತಿದ್ದೀಯೆಂದು ಪ್ರತ್ಯೇಕವಾಗಿ ಅಂದಾಗ ಪರೋಕ್ಷವಾಗಿ ಬಾಧೆಪಡಬೇಕಾದ ವಿಷಯವನ್ನು ಕುರಿತು ಬಾಧೆಪಡಲಿಲ್ಲವೆಂದು, ನಿಜವಾಗಲು ಬಾಧೆಪಡಬೇಕಾಗಿರುವುದೇನೊ ಇದೆಯೆಂದು ತಿಳಿಯುತ್ತಿದೆ. ಇಲ್ಲಿ ವಿವರವಾಗಿ ಶೋಕಿಸಲ್ಪಡುವುದ್ಯಾವುದು? ಶೋಕಿಸಲ್ಪಡದಿರುವುದು ಯಾವುದು? ಎಂದು ಯೋಚಿಸಬೇಕಾಗಿ ಬರುತ್ತಿದೆ. ಯಾವುದಕ್ಕಾಗಿ ಶೋಕಿಸಬಾರದೊ ಅಂದರೆ ಬಾಧೆಪಡಬಾರದೊ ಅದನ್ನು ಕುರಿತು ಅದೇ ಶ್ಲೋಕದಲ್ಲಿ "ಗತಾಸೂ ನಗತಾಸೂಂಶ್ಚ" ಎಂದು ಹೇಳಲ್ಪಟ್ಟಿದೆ. ಅಂದರೆ ಗತಿಗಳೊಂದಿರುವ, ಗತಿಗಳಿಲ್ಲದವುಗಳನ್ನು ಕುರಿತು ನೀನು ಬಾಧೆ ಪಡುತ್ತಿದ್ದೀಯಾ ಎನ್ನುತ್ತಿದ್ದಾನೆ. ಆಗ ಗತಿಗಳಿರುವ ಗತಿಗಳಿಲ್ಲದವುಗಳಿಗಿಂತ ಬೇರೆಯದನ್ನು ಕುರಿತು ಬಾಧೆಪಡಬೇಕಾಗಿದೆಯೆಂದು ಸುಲಭವಾಗಿ ಅರ್ಥ ವಾಗುತ್ತಿದೆ. ಈಗ ಪ್ರತಿ ಮಾನವನು ತಿಳಿಯಬೇಕಾದ ವಿವರ ಗತಿಗಳು ಇರುವುದ್ಯಾವುದು? ಗತಿಗಳು ಇಲ್ಲದಿರುವುದ್ಯಾವುದು? ಗತಿಗಳಿರುವ ಮತ್ತು ಗತಿಗಳಿಲ್ಲದವುಗಳಿಗಿಂತ ಬೇರೆಯಾಗಿರುವುದ್ಯಾವುದು? ಎನ್ನುವ ವಿಷಯ ಮುಖ್ಯ. ಏಕೆಂದರೆ! ಆ ಮೂರನೆಯದಕ್ಕಾಗಿ ನಾವು ಬಾಧೆಪಡಬೇಕು.

ಗತಿ ಎಂದರೆ ಎಷ್ಟೋ ಅರ್ಥಗಳು ಇವೆ. 1) ಹೋಗುವುದು 2) ವಿಧ 3) ದಾರಿ 4) ಸ್ಥಾನ 5) ಆಧಾರ 6) ಪ್ರಯಾಣ 7) ಉಪಾಯ 8) ಚಲನೆ ಎಂದು ಇಷ್ಟು ಅರ್ಥಗಳು ಇವೆ. ಇಲ್ಲಿ ಸಂದರ್ಭಾನುಸಾರವಾಗಿ ಭೌತಿಕ ಅರ್ಥವಾದ **"ಚಲನೆ"** ಎನ್ನುವ ಪದ ತೆಗೆದುಕೊಂಡಾಗಲೇ ಶ್ರೀಕೃಷ್ಣನ ಮಾತಿನಲ್ಲಿನ ನಿಜಾರ್ಥ ಹೊರಬೀಳುತ್ತದೆಂದು ತಿಳಿಯಬೇಕು. ಅದರ ಪ್ರಕಾರ ಚಲನೆ ಹೊಂದಿರುವವು ಶರೀರವಿರುವ ಸಮಸ್ತ ಜೀವರಾಶಿಗಳಿವೆ. ಹಾಗೆ

ಚಲನೆಯಿಲ್ಲದ ವಸ್ತುಜಾಲ ಪ್ರಪಂಚದಲ್ಲಿ ಎಷ್ಟೋ ಇದೆ. ಚಲನೆ ಹೊಂದಿದ ಮಾನವರು, ಪ್ರಾಣಿಗಳು, ಕ್ರಿಮಿ ಕೀಟಕಗಳು, ಚಲನೆ ಇಲ್ಲದ ವಸ್ತುಗಳನ್ನು ಒಟ್ಟಾರೆ ಸೇರಿಸಿ ಜ್ಞಾನ ತಿಳಿದ ಹಿರಿಯರು "ಪ್ರಕೃತಿ" ಎಂದು ಹೆಸರು ಇಟ್ಟಿದ್ದಾರೆ. ಚಲನೆ ಇರುವ ಚಲನೆ ಇಲ್ಲದ ಈ ಪ್ರಕೃತಿಗಿಂತ ಪ್ರತ್ಯೇಕವಾದುದು ಒಂದು ಇದೆ. ಅದೇ **'ದೈವ'**. ಆ ದಿನ ಅರ್ಜುನನು ಪ್ರಕೃತಿಯಲ್ಲಿನ ಮನುಷ್ಯ ಬಗ್ಗೆಯೇ ಬಾಧೆಪಟ್ಟಿದ್ದಾನೆ ಆದರೆ ಪ್ರಕೃತಿಗೆ ಅತೀತವಾದ ದೈವವನ್ನು ಕುರಿತು ಬಾಧೆಪಡಲಿಲ್ಲ. ಆದ್ದರಿಂದಲೇ ಶ್ರೀಕೃಷ್ಣನು ಯಾವುದಕ್ಕಾಗಿ ಬಾಧೆಪಡಬಾರದೊ, ಅದಕ್ಕಾಗಿಯೇ ನೀನು ಬಾಧೆಪಡುತ್ತಿದ್ದೀಯಾ ಎಂದು ಎಚ್ಚರಿಸಿದ್ದಾನೆ. ಅಂದಿನ ಅರ್ಜುನನೇ ಅಲ್ಲದೆ ಈದಿನದ ಪ್ರತಿ ಮಾನವನು ಪ್ರಕೃತಿ ಸಂಬಂಧ ವಿಷಯಗಳಿಗೇ ಪರದಾಡುತ್ತಿದ್ದಾನೆ. ತಾವು ಓದಿದ ದೊಡ್ಡ ದೊಡ್ಡ ಓದುಗಳೆಲ್ಲ ಈ ಪ್ರಕೃತಿಯಲ್ಲಿನ ವಿಷಯಗಳನ್ನು ಕುರಿತು ಯೋಚಿಸುವುದಕ್ಕೇ ಸರಿಪಡಿಸುತ್ತಿದ್ದಾನೆ. ನಿನ್ನ ಪ್ರಜ್ಞೆಯೆಲ್ಲ ಪ್ರಕೃತಿ ವಿಷಯಗಳಿಗೇ ಉಪಯೋಗಿಸಿ ಮಾತನಾಡುತ್ತಿದ್ದೀಯೆಂದು ಅರ್ಜುನನನ್ನು ಶ್ರೀಕೃಷ್ಣನು ಎಚ್ಚರಿಸಿದ್ದಾನೆ. ಅಂದರೆ ನಮ್ಮ ಪ್ರಜ್ಞೆಯನ್ನು ದೇವರಕಡೆ ಉಪಯೋಗಿಸಲಿಲ್ಲವೆಂದು ಹೇಳದೆಯೇ ತಿಳಿಯುತ್ತಿದೆ. ತಿಳಿದ ಜ್ಞಾನಿಗಳು ಪ್ರಕೃತಿ ಜನಿತವಾದ ಸಮಸ್ತ ವಸ್ತುಗಳನ್ನು ಮತ್ತು ಜೀವಜಾಲಗಳನ್ನು ಕುರಿತು ಚಿಂತಿಸುವುದಿಲ್ಲವೆಂದು, ಅವರು ದೈವವನ್ನು ಕುರಿತೇ ಚಿಂತಿಸುತ್ತಾರೆಂದು, ಶೋಕಿಸುತ್ತಾರೆಂದು ಹೇಳಲ್ಪಟ್ಟಿದೆ.

ಭಗವಂತನು ತಿಳಿಸಿದ ಮೊಟ್ಟಮೊದಲ ಶ್ಲೋಕದಲ್ಲಿಯೇ ಕಾಣಿಸುವ ಸಮಸ್ತ ಜೀವರಾಶಿಗಳು ಪ್ರಕೃತಿಯೇಯೆಂದು, ಕಾಣಿಸದ ಪರಮಾರ್ಥವು ಒಂದಿದೆಯೆಂದು ಸೂಚಿಸಿದ್ದಾನೆ. ಹಾಗೆಯೇ ನಾವು ಪ್ರತಿ ನಿತ್ಯ ಬಾಧೆಪಡುವುದು, ಅಳುವುದು, ಚಿಂತಿಸುವುದು ಪ್ರಕೃತಿಯಲ್ಲಿನ ವಿಷಯಗಳಿಗೇ ಎಂದು ಪರಮಾರ್ಥ ವಿಷಯಕ್ಕೆ ಅಲ್ಲವೆಂದು ಕೂಡಾ ಸೂಚಿಸಿದ್ದಾನೆ. ಪಂಡಿತರಾದವರು ಅಂದರೆ ಜ್ಞಾನ ತಿಳಿದವರು ಚರಾಚರ ಪ್ರಕೃತಿಗಾಗಿ ಸ್ವಲ್ಪವೂ ಬಾಧೆಪಡುವುದಿಲ್ಲವೆಂದು ತಿಳಿಸಿದ್ದಾನೆ. ಹಾಗೆಯೇ ನೀನು ಚಲನೆಹೊಂದಿದ, ಚಲನೆಯಿಲ್ಲದವುಗಳಿಗಾಗಿ ನಿನ್ನ ಪ್ರಜ್ಞೆಯನ್ನೆಲ್ಲಾ ಉಪಯೋಗಿಸುತ್ತಿದ್ದೀಯಾ. ಅದು ಸರಿಯಾದ

ಕೆಲಸವಲ್ಲವೆಂದು ಕೂಡಾ ತಿಳಿಸಿದ್ದಾನೆ. ಮೊದಲ ಶ್ಲೋಕದಲ್ಲಿಯೇ ಶೋಕಿಸಲ್ಪಡುವವೆಂದು, ಶೋಕಿಸಲ್ಪಡದಿರುವವೆಂದು ಎರಡು ಭಾಗಗಳಾಗಿ ಮಾಡಿ ತೋರಿಸುವುದು ದೊಡ್ಡ ವಿಶೇಷ. ಅದರಲ್ಲಿ ನಮ್ಮ ಪ್ರಜ್ಞೆಯನ್ನು ಪ್ರಕೃತಿ ಕಡೆ ವಿನಿಯೋಗಿಸದೆ ಪರಮಾತ್ಮ ಕಡೆ ವಿನಿಯೋಗಿಸಿರೆಂದು ಸೂಚಿಸುವುದು ಮೊಟ್ಟಮೊದಲ ಶ್ಲೋಕದಲ್ಲಿನ ಪ್ರತ್ಯೇಕತೆಯೆಂದು ತಿಳಿಯಬೇಕು.

(ಬಹಳಜನ ಬರೆದ ಗೀತಾ ಗ್ರಂಥಗಳಲ್ಲಿ ಈ ಶ್ಲೋಕವೊಂದರ ಭಾವನೆಗು ಇಲ್ಲಿ ನಮ್ಮಿಂದ ಬರೆಯಲ್ಪಟ್ಟ ಭಾವನೆಗು ಬಹಳ ವ್ಯತ್ಯಾಸ ಇದೆ. ಅವರು ಬರೆದಿರುವುದರಲ್ಲಿ ಕೇವಲ ಮಾನವರನ್ನು ಕುರಿತು, ಮರಣಿಸಿದವರನ್ನು ಬದುಕಿರುವವರನ್ನು ಕುರಿತು ಹೇಳಿರುವಾಗ, ನಮ್ಮ ಭಾವನೆಯಲ್ಲಿ ಒಟ್ಟಾರೆ ಪ್ರಕೃತಿಯನ್ನು ಕುರಿತು ಚಲನೆಯಿಲ್ಲದ ಚಲನೆ ಇರುವ, ಜೀವವಿಲ್ಲದ ಜೀವವಿರುವವುಗಳನ್ನು ಕುರಿತು ಹೇಳುವುದು ನಡೆದಿದೆ. ಬದುಕಿರುವ ಮರಣಿಸಿದವರನ್ನು ಕುರಿತು ತಿಳಿದವರು ಚಿಂತಿಸುವುದಿಲ್ಲವೆಂದು ತಿಳಿಸಿದರೆ "ಅವರ ಮೇಲೆ ನಮಗೇನು ಬಾಧೆಯಿಲ್ಲ, ನಮಗಿರುವ ಚಿಂತೆಯೆಲ್ಲವೂ ಧನದ ಮೇಲೆಯೇ ಬದುಕಿರುವವರು ಹೇಗಿದ್ದರೂ ಫರವಾಗಿಲ್ಲ, ರುಚಿಯಿಲ್ಲದ ತಿಂಡಿ ತಿಂದರೂ ಫರವಾಗಿಲ್ಲ, ಹಣ ಮಾತ್ರ ಖರ್ಚು ಆಗಬಾರದು. ಬದುಕಿರುವವರು ರೋಗದಿಂದ ಬಾಧೆಪಡುತ್ತಿದ್ದರೂ ಫರವಾಗಿಲ್ಲ ಆದರೆ ಅವರನ್ನು ಕುರಿತು ನನಗೇನು ಚಿಂತೆಯಿಲ್ಲ. ಆಸ್ಪತ್ರೆಗೆ ಹೋದರೆ ಹಣ ಖರ್ಚಾಗುತ್ತದೆನ್ನುವುದೇ ನನ್ನ ಬಾಧೆ" ಎನ್ನುವವರು ಇದ್ದಾರೆ. ಹಾಗೇ ತಮ್ಮವರು ಮರಣಿಸಿದರೂ ಚಿಂತಿಸುವುದಿಲ್ಲ. ಹಾಗೆಂದು ಇವರನ್ನು ಜ್ಞಾನಿಗಳೆನ್ನೋಣವಾ! ಇವರಿಗೆ ಹಣ, ಚಿನ್ನದ ಮೇಲೆ ಹೊರತು ಬದುಕಿರುವ, ಮರಣಿಸಿದವರ ಮೇಲೆ ಯಾವುದೆ ಚಿಂತೆ, ಬಾಧೆ ಇರುವುದಿಲ್ಲ. ಪರಪುರುಷ ತನ್ನ ಹೆಂಡತಿಯನ್ನು ಬಲವಂತ ಮಾಡಿದರೂ, ಆಕೆಗಾಗಿ ಚಿಂತಿಸುವುದಿಲ್ಲ. ತನ್ನ ಸ್ವಂತ ಮಗನನ್ನು ಇತರರು ಹತ್ಯೆ ಮಾಡಿದರೂ, ಹಣ ಹೋಗುತ್ತದೆಂದು ಕೇಸು ಇಡುವುದಿಲ್ಲ. ಉಳಿದ ಗೀತೆಗಳಲ್ಲಿ ಬರೆಯಲ್ಪಟ್ಟ ಈ ಶ್ಲೋಕಾರ್ಥ ಪ್ರಕಾರವಾದರೆ ಇವರನ್ನು ಪರಮ

ಜ್ಞಾನಿಗಳೆಂದು ಹೇಳಬಹುದು. ಇದು ನಿಜವಾಯೆಂದು ಯೋಚಿಸಿ ನೋಡಿದವನು ಚಿನ್ನದ ಮೇಲೆ, ಧನದ ಮೇಲೆ ಆಸೆ ಪರನೇ ಹೊರತು ಜ್ಞಾನಿ ಯಾವುದೆ ಕಾರಣಕ್ಕೆ ಅಲ್ಲವೆಂದು ತಿಳಿಯುತ್ತಿದೆ. ಆದುದರಿಂದ ಇಲ್ಲಿಯವರೆಗು ಎಲ್ಲರು ಬರೆದುಕೊಂಡ ಭಾವನೆ ಸರಿಯಲ್ಲವೆಂದು ಹೇಳಬಹುದು.)

ಗತಿಸಿದ ಮತ್ತು ಗತಿಸದವರನ್ನು ಕುರಿತು ಜ್ಞಾನಿಗಳು ಚಿಂತಿಸುವುದಿಲ್ಲವೆಂದು ಬರೆದ ವಾಕ್ಯಗಳು ತಪ್ಪು, ಶ್ರೀಕೃಷ್ಣನು ಹಾಗೆ ಹೇಳಲಿಲ್ಲ. ಮನುಷ್ಯರನ್ನು ಕುರಿತೇ ಹೇಳಿದ್ದರೆ ಹೋದವರಿಗೋಸ್ಕರವಾದರೂ ಇದ್ದವರಿಗೋಸ್ಕರವಾದರೂ ಚಿಂತಿಸದೆ ಕೇವಲ ಹಣಕ್ಕೋಸ್ಕರ ಚಿಂತಿಸುವ ಲೋಭಿಯನ್ನು ಕೂಡಾ ಜ್ಞಾನಿ ಅನ್ನಬೇಕಾಗಿ ಬರುತ್ತದೆ. ಆದ್ದರಿಂದ ಈ ಶ್ಲೋಕದಲ್ಲಿ ಶ್ರೀಕೃಷ್ಣನು ಆಳವಾಗಿ ಹೇಳಿದ ಜ್ಞಾನವನ್ನು ಗ್ರಹಿಸಿದರೆ, ಚರ ಅಚರ ಪ್ರಕೃತಿಯನ್ನು ಕುರಿತು ಜ್ಞಾನಿಗಳಾದವರು ಚಿಂತಿಸುವುದಿಲ್ಲವೆಂದು, ಪ್ರಕೃತಿಗೆ ಅತೀತವಾದ ದೈವವನ್ನು ಕುರಿತು ಚಿಂತಿಸುವವನು ನಿಜವಾದ ಜ್ಞಾನಿಯೆಂದು ತಿಳಿಯುತ್ತಿದೆ. ಇಲ್ಲಿಯವರೆಗು ಈ ಅಧ್ಯಾಯದಲ್ಲಿ ಮೊದಲ ಶ್ಲೋಕ ಅರ್ಥವನ್ನು ಎಲ್ಲರಿಗೂ ಭಿನ್ನವಾಗಿ ಬರೆದಿದ್ದಾರೆ ಎಂದು ಕೆಲವರಂದುಕೊಳ್ಳಬಹುದು. ಎಷ್ಟೋ ಜನ ಸ್ವಾಮಿಗಳು, ಪೀಠಾಧಿಪತಿಗಳು, ಯೋಗಿಗಳು ಹೇಳಿದ ಭಾವನೆಯನ್ನು ಅಲ್ಲಗಳೆಯಬಹುದಾ? ಎಂದು ಕೆಲವರು ಕೇಳಬಹುದು. ಎಲ್ಲರಿಗೂ ಒಂದೇ ಉತ್ತರ ಹೇಳುವುದೇನೆಂದರೆ! ನಿಜ ಕೆಂಡದಂಥದ್ದು, ಎಂದಿಗಾದರೂ ಹೊರಬೀಳಬಲ್ಲದು. **ಬಚ್ಚಿಟ್ಟಿರುವ ಸತ್ಯವನ್ನು ಬಹಿರ್ಗತ ಮಾಡುವುದೇ ನನ್ನ ಕೆಲಸ** ಆದಾಗ ಒಂದು ಭಗವದ್ಗೀತೆಯೇ ಅಲ್ಲ, ಯಾವ ಮತದಲ್ಲಿನ ಜ್ಞಾನವನ್ನಾದರೂ ಬಿಚ್ಚಿ ಹೇಳುವುದು ನನ್ನ ಕರ್ತವ್ಯ. ಈ ನನ್ನ ಕಾರ್ಯದಲ್ಲಿ ಭಗವದ್ಗೀತೆಯಲ್ಲಿ ನಂತರ ಬರುವ ಶ್ಲೋಕಗಳಿಗೆ ಕೂಡಾ ಭಾವ ಮಾರ್ಪಾಟು ತಪ್ಪದೆ ಇರುತ್ತದೆ. ಇದು ತ್ರೈತ ಎನ್ನುವ ಸಿದ್ಧಾಂತದ ಮೇಲೆ ಆಧಾರಪಟ್ಟು ಬರೆಯುವುದು, ಆದ್ದರಿಂದ ಶಾಸ್ತ್ರಬದ್ಧವಾದುದಾಗಿ ಲೆಕ್ಕಿಸಿ ನೋಡಬೇಕು. ಈ ಶ್ಲೋಕವಾಗಲಿ, ಬರುವ ಶ್ಲೋಕವಾಗಲಿ ಹೇತುವಾದಿಗಳಿಗೆ ಪ್ರಶ್ನೆಗಳು ಉಳಿಸುವುದಿಲ್ಲವೆಂದು ಎಲ್ಲವುಗಳಿಗೂ ಎಲ್ಲರಿಗೂ ಸಮಾಧಾನವಾಗಿ ಇರುತ್ತವೆಯೆಂದು ತಿಳಿಸುತ್ತಿದ್ದೇವೆ.

ಪ್ರತಿ ಶ್ಲೋಕವು ನಾಲ್ಕು ಸೂತ್ರಗಳ ಪ್ರಕಾರ ನೋಡಬೇಕೆಂದು ಮೊದಲೇ ಹೇಳಿದ್ದೇವೆ. ಅವುಗಳನ್ನು ಮತ್ತೊಂದು ಸಲ ಗುರುತು ಮಾಡುತ್ತಿದ್ದೇವೆ. 1) ಓದುತ್ತಿರುವ ಶ್ಲೋಕ ಜೀವಾತ್ಮಗಾ, ಆತ್ಮಗಾ, ಪರಮಾತ್ಮಗಾ, ಪ್ರಕೃತಿಗಾ ಯಾರನ್ನು ಕುರಿತು ಹೇಳಲ್ಪಟ್ಟಿದೆ. 2) ಓದುತ್ತಿರುವ ಶ್ಲೋಕ ಬ್ರಹ್ಮಯೋಗಕ್ಕಾ ಅಥವಾ ಕರ್ಮಯೋಗಕ್ಕಾ ಯಾವುದನ್ನು ಕುರಿತು ಹೇಳಲ್ಪಟ್ಟಿದೆ. 3) ಓದುತ್ತಿರುವ ಶ್ಲೋಕ ಸಾಕಾರಕ್ಕಾ, ನಿರಾಕಾರಕ್ಕಾ ಯಾರನ್ನು ಕುರಿತು ಹೇಳಲ್ಪಟ್ಟಿದೆ 4) ಓದುತ್ತಿರುವ ಶ್ಲೋಕ ಶಾಸ್ತ್ರಬದ್ಧವಾದುದಾ ಅಲ್ಲವಾ! ಎನ್ನುವವು ಸೂತ್ರಗಳಾದರೆ ನಾಲ್ಕನೆ ಸೂತ್ರದ ಪ್ರಕಾರ ಶಾಸ್ತ್ರಬದ್ಧವಾದ ಶ್ಲೋಕಗಳನ್ನೇ ನಾವು ಬರೆಯುತ್ತಾ ಶಾಸ್ತ್ರಬದ್ಧವಲ್ಲದವುಗಳನ್ನು ಬಿಟ್ಟುಹಾಕುತ್ತಿದ್ದೇವೆ. ಆದುದರಿಂದ ನೀವು ಮುಖ್ಯವಾಗಿ ನೋಡಬೇಕಾಗಿರುವವು ಮೂರು ಸೂತ್ರಗಳು ಮಾತ್ರವೇ. ಅವು ಕೂಡಾ ನಿಮಗೆ ಅರ್ಥವಾಗುವಂತೆ ಯಾವ ಶ್ಲೋಕ ಯಾವುದಕ್ಕೆ ಸಂಬಂಧಿಸಿರುವುದೊ ಶ್ಲೋಕದ ಪಕ್ಕದಲ್ಲಿ ಬ್ರಾಕೆಟ್‌ನಲ್ಲಿ ತಿಳಿಸುತ್ತಿದ್ದೇವೆ. ಆದ್ದರಿಂದ ಶ್ಲೋಕ ಪಕ್ಕದಲ್ಲಿ ಬ್ರಾಕೆಟ್‌ನಲ್ಲಿ ಇರುವುದನ್ನು ಪ್ರತಿ ಒಬ್ಬರು ಗಮನಿಸಬೇಕಾಗಿ ತಿಳಿಸುತ್ತಿದ್ದೇವೆ.

**ಶ್ಲೋ॥ 12 ನತ್ವೇವಾಹಂ ಜಾತು ನಾಸಂ ನತ್ವಂ ನೇಮೇ ಜನಾಧಿಪಾಃ।**
**ನಚೈವ ನ ಭವಿಷ್ಯಾಮ ಸ್ಸರ್ವೇವಯ ಮತಃ ಪರಮ್ ॥**

**ಭಾವಾರ್ಥ :–** "ಅರ್ಜುನಾ! ನಾನು ಒಂದು ಸಮಯದಲ್ಲಿ ಇಲ್ಲ ಎನ್ನುವುದು ಇಲ್ಲ. ನೀನೂ ಸಹ ಅಷ್ಟೇ. ಈ ರಾಜರು ಮೊದಲಾದವರು ಕೂಡಾ ಅಷ್ಟೇ. ನಂತರ ಕಾಲದಲ್ಲಿ ಕೂಡಾ ನಾವೆಲ್ಲರೂ ಇಲ್ಲದಂತೆ ಹೋಗುತ್ತೇವೆನ್ನುವುದು ಇಲ್ಲ."

**ವಿವರ :–** ಇಲ್ಲಿ ಹೇಳುವವನು ಕೃಷ್ಣನು, ಕೇಳುವವನು ಅರ್ಜುನನು. ಹೇಳುವವನು ತಿಳಿದವನು, ಕೇಳುವವನು ತಿಳಿಯದವನು. ಜ್ಞಾನ ತಿಳಿಯದವನು ಜೀವಾತ್ಮ. ಜ್ಞಾನ ತಿಳಿದವನು ಆತ್ಮ. ಕೃಷ್ಣನ ಶರೀರದಲ್ಲಿನ ಆತ್ಮ ಜ್ಞಾನವನ್ನು ಹೇಳುತ್ತಿರುವಾಗ, ಅರ್ಜುನನ ಶರೀರದಲ್ಲಿರುವ ಜೀವಾತ್ಮ ಆಲಿಸುತ್ತಿದೆ. ಪ್ರತಿ ಮನುಷ್ಯನ ಶರೀರದಲ್ಲಿ

ಜೀವಾತ್ಮ ಒಂದು, ಆತ್ಮ ಒಂದು, ಪರಮಾತ್ಮ ಒಂದು ಒಟ್ಟು ಮೂರು ಆತ್ಮಗಳು ಇವೆ. ಈ ಮೂರು ಆತ್ಮಗಳ ವಿಷಯ ಭಗವದ್ಗೀತೆಯಲ್ಲಿ ಸುಮಾರು ಹದಿನೈದನೆ ಅಧ್ಯಾಯ ಪುರುಷೋತ್ತಮ ಪ್ರಾಪ್ತಿ ಯೋಗದವರೆಗು ಯಾರಿಗೂ ತಿಳಿದಿಲ್ಲ. ಅಲ್ಲಿ ಪುರುಷೋತ್ತಮನಾದ ಮೂರನೇ ಪುರುಷನನ್ನು ಕುರಿತು ಹೇಳಿದಾಗ ತಪ್ಪದೆ ಉಳಿದ ಇಬ್ಬರು ಪುರುಷರನ್ನು ಕುರಿತು ಹೇಳಬೇಕಾಗಿ ಬಂದಿದೆ. ಆಗ ಅಲ್ಲಿ ಮೂವರು ಪುರುಷರನ್ನು ಕುರಿತು ಬಂದಿದೆ. ಅಲ್ಲಿಯವರೆಗೂ ಮೂವರು ಪುರುಷರ ವಿಷಯ ಯಾರಿಗೂ ತಿಳಿದಿಲ್ಲ. ಪ್ರಥಮ ದೈವ ಗ್ರಂಥವೆಲ್ಲವೂ ಓದಿರುವುದರಿಂದ ಈ ಮೊದಲ ಶ್ಲೋಕದಲ್ಲಿಯೇ ಮೂರು ಆತ್ಮಗಳನ್ನು ಕುರಿತು ಹೇಳುತ್ತಿದ್ದೇವೆ. ಹೇಳುವವನು, ಕೇಳುವವನು ಇಬ್ಬರು ಮನುಷ್ಯರೇ ಆದರೂ ಅವರಲ್ಲಿ ಅರ್ಜುನನು ಸಾಧಾರಣ ಮನುಷ್ಯ. ಕೃಷ್ಣನು ಸಾಧಾರಣ ಮನುಷ್ಯನಲ್ಲ. ಆತನು ಪ್ರತ್ಯೇಕವಾಗಿ ದೇವರ ಪ್ರತಿನಿಧಿಯಾಗಿ ದೇವರಿಂದ ಕಳಿಸಲ್ಪಟ್ಟವನು. ಆತನನ್ನು ಭಗವಂತನೆಂದು ಕರೆಯುತ್ತೇವೆ. ಭಗವಂತನು ಎಂದರೆ ಭಗದಿಂದ ಹುಟ್ಟಿದವನು. ಅಂದರೆ ತಾಯಿಗರ್ಭದಿಂದ ಸಜೀವವಾಗಿ ಹುಟ್ಟಿದವನೆಂದು ಅರ್ಥ. ಸಾಧಾರಣ ಮನುಷ್ಯರು ಯಾರೂ ತಾಯಿಗರ್ಭದಿಂದ ಸಜೀವವಾಗಿ ಹುಟ್ಟುವುದಿಲ್ಲ.

ಕೃಷ್ಣನು ಭಗವಂತನಾದರೂ, ಅರ್ಜುನನು ಸಾಧಾರಣ ಮನುಷ್ಯನಾದರೂ, ಇಬ್ಬರ ಶರೀರಗಳಲ್ಲಿ ಮೂರು ಆತ್ಮಗಳಿರುವುದು ಸಹಜ. ಅರ್ಜುನನ ಶರೀರದಲ್ಲಿನ ಜೀವಾತ್ಮ ಕರ್ಮಗಳು ಅನುಭವಿಸುತ್ತಿರುವಾಗ, ಆತ್ಮ ಕರ್ಮಪ್ರಕಾರ ಕೆಲಸಗಳು ಮಾಡುತ್ತಿರುತ್ತಾನೆ. ಪರಮಾತ್ಮ ಸಾಕ್ಷಿಯಾಗಿ ನೋಡುತ್ತಿರುತ್ತಾನೆ. ಭಗವಂತನಾದ ಕೃಷ್ಣನ ಶರೀರದಲ್ಲಿ ಕೂಡಾ ಮೂರು ಆತ್ಮಗಳೇ ಇರುವಾಗ, ಒಂದೇ ಆತ್ಮ ಮೂರು ಆತ್ಮಗಳಾಗಿ ಚಲಾವಣೆ ಆಗುತ್ತಿದೆ. ಮಧ್ಯಾತ್ಮ ಒಂದೇ ಮೂರು ಆತ್ಮಗಳ ವಿಧಿಗಳನ್ನು ನಿರ್ವಹಿಸುತ್ತಿದೆ. ಭಗವದ್ಗೀತೆಯನ್ನು ಹೇಳುವಾಗ ಆತ್ಮವೇ ಸ್ವತಃವಾಗಿ ಹೇಳುತ್ತಾ ತನ್ನನ್ನು ಒಂದುಸಲ ಪರಮಾತ್ಮನಾಗಿ, ಮತ್ತೊಂದು ಸಲ ಜೀವಾತ್ಮನಾಗಿ ಹೇಳುತ್ತಿದೆ. ಜೀವಾತ್ಮನಾಗಿ ಹೇಳುತ್ತಾ ಎಲ್ಲರಂತೆ ನನಗು

ಜನ್ಮಗಳು ಇವೆ. ನೀನು ಹುಟ್ಟಿದಂತೇ ನಾನು ಹುಟ್ಟುತ್ತಿದ್ದೇನೆ. ನೀನು ಮರಣಿಸಿದಂತೆ ನಾನು ಮರಣಿಸುತ್ತಿದ್ದೇನೆ ಎಂದು ಭಗವದ್ಗೀತೆಯಲ್ಲಿಯೇ ಹೇಳಿದ್ದಾನೆ. ಹಾಗೇ ನನಗು ಎಷ್ಟೋ ಜನ್ಮಗಳು ಉಂಟಾಗಿವೆ ನಿನಗೂ ಎಷ್ಟೋ ಜನ್ಮಗಳು ಉಂಟಾಗಿವೆ ಎಂದು ಕೂಡಾ ಹೇಳಿದ್ದಾನೆ. ನಾನು ಸೃಷ್ಟಿ ಆದಿಯಿಂದ ಇದ್ದೇನೆ, ನೀನು ಸೃಷ್ಟಿ ಆದಿಯಿಂದ ಇದ್ದೀಯಾ. ಈ ಭೂಮಿಮೇಲೆ ಮನುಷ್ಯರೆಲ್ಲರೂ ಅಷ್ಟೇ. ಒಂದು ಸಮಯದಲ್ಲಿದ್ದು ನಂತರ ಇಲ್ಲದಂತೆ ಹೋಗುತ್ತಾರೆನ್ನುವ ಮಾತೇ ಇಲ್ಲ. ಎಲ್ಲರೂ ಮೊದಲಿನಿಂದ ಸೃಷ್ಠಿ ಆದಿಯಿಂದ ಇದ್ದಾರೆ. ನಂತರ ನಡೆಯುವಂತಹ ಕಾಲದಲ್ಲಿ ಎಲ್ಲರೂ ಇರುತ್ತಾರೆ ಎಂದು ಕೃಷ್ಣನು ಹೇಳಿದ್ದಾನೆ.

ಆತ್ಮಜ್ಞಾನ ತಿಳಿದು ಯೋಚಿಸಿದರೆ ನಾವೆಲ್ಲರೂ (ಮನುಷ್ಯರೆಲ್ಲರೂ) ಮೊದಲೇ ಹುಟ್ಟಿಸಲ್ಪಟ್ಟಿದ್ದೇವೆ. ಭೂಮಿಮೇಲೆ ಮನುಷ್ಯರನ್ನು ಮನುಷ್ಯರಂತೆ ಎಲ್ಲಾ ಅನುಭವಗಳು ಇರುವ ದೇವತೆಗಳನ್ನು ದೇವರು ಸೃಷ್ಟಿಸಿದ್ದಾನೆ. ಮನುಷ್ಯರು ಕಾಣಿಸುತ್ತಿದ್ದಾರೆ. ದೇವತೆಗಳು ಸೂಕ್ಷ್ಮ ಶರೀರದಿಂದ ಇರುವುದರಿಂದ ಅವರು ಕಾಣಿಸುತ್ತಿಲ್ಲ. ರಾಮಾಯಣ ಚರಿತ್ರೆಯಲ್ಲಿ ನಾವು ಕೂಡಾ ಕೆಲವರು ರಾಮನ ಪಕ್ಕದಲ್ಲಿದ್ದು ಯುದ್ಧ ಮಾಡಿರುತ್ತೇವೆ. ಮತ್ತೆ ಕೆಲವರು ರಾವಣನ ಕಡೆಯಿಂದ ಯುದ್ಧ ಮಾಡಿರುತ್ತೇವೆ. ಆಗ ಮರಣಿಸಿದವರು ಪುನಃ ಎಲ್ಲಿಯೊ ಒಂದುಕಡೆ ಹುಟ್ಟಿ, ಅಲ್ಲಿ ಸ್ವಲ್ಪ ಕಾಲ ಬದುಕಿ, ಅಲ್ಲಿ ಕೂಡಾ ಮರಣಿಸಿ ಮತ್ತೊಂದುಕಡೆ ಹುಟ್ಟಿ, ದೈವಜ್ಞಾನವನ್ನು ತಿಳಿಯದೆ ಸಾಯುತ್ತಾ, ಹುಟ್ಟುತ್ತಾ ಹೀಗೆ ಎಷ್ಟೋ ಜನ್ಮಗಳು ಬದಲಾಯಿಸುತ್ತಾ, ಈಗ, ಇಲ್ಲಿ, ಈ ಪರಿಸ್ಥಿತಿಯಲ್ಲಿ ಇದ್ದೇವೆ. ಹೀಗೆ ಜನ್ಮಗಳು ಬದಲಾಯಿಸುತ್ತಾ ಎಷ್ಟು ಕಾಲವಾದರೂ ಇರಬಲ್ಲೆವು. ಆದುದರಿಂದ ಬರುವಂತಹ ಕಾಲದಲ್ಲಿ ನಾವು ಇರುವುದಿಲ್ಲ ಎನ್ನುವಮಾತು ಇಲ್ಲ. ಜನ್ಮಗಳಿರುವಷ್ಟುಕಾಲ ಇರುತ್ತೇವೆ. ಒಂದುವೇಳೆ ಆತ್ಮಜ್ಞಾನವನ್ನು ತಿಳಿಯಲ್ಪಟ್ಟು ಯೋಗವನ್ನು ಆಚರಿಸಿದವನು, ಜ್ಞಾನಾಗ್ನಿಯನ್ನು ಸಂಪಾದಿಸಿಕೊಂಡು ಕರ್ಮಗಳನ್ನು ಸುಟ್ಟುಕೊಂಡರೆ, ಜನ್ಮಗಳಿಗೆ ಕಾರಣವಾದ ಕರ್ಮ ಇಲ್ಲದಂತೆ ಹೋದರೆ, ಆಗ ಮನುಷ್ಯ ಜನ್ಮಿಸದೇ ದೇವರಲ್ಲಿ ಐಕ್ಯವಾಗುತ್ತಾನೆ. ಕರ್ಮಗಳು

ಸುಡದವರೆಗು, ಜ್ಞಾನ ತಿಳಿಯದವರೆಗು ಭೂಮಿಮೇಲೆ ಇರುವ ಪ್ರತಿಯೊಬ್ಬರು ಸಾಯುತ್ತಾ, ಹುಟ್ಟುತ್ತಾ ಎಷ್ಟುಕಾಲವಾದರೂ ಭೂಮಿಮೇಲೆ ಇರಬೇಕಾಗಿದ್ದೇ ಎಂದು ಕೃಷ್ಣನು ಅರ್ಜುನನಿಗೆ ಹೇಳುವುದು ನಡೆದಿದೆ. ಹೇಳಿರುವುದು ಕಾಣಿಸುವ ಕೃಷ್ಣನಾದರೂ ಕೃಷ್ಣನ ಶರೀರದಲ್ಲಿ ಕಾಣಿಸದ ಆತ್ಮ ಹೇಳಿದೆ.

ಪ್ರತಿ ಮನುಷ್ಯನ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಇವೆ. ಮೂರು ಕಾಣಿಸದ ಆತ್ಮಗಳು ಆಗಿರುವುದರಿಂದ ಮೂರನ್ನು ಮೂರು ಕತ್ತಲೆ ರಾತ್ರಿಗಳಿಗೆ ಹೋಲಿಸಿ, 'ತೌರಾತು' ಎಂದು ಮೂರು ಆತ್ಮಗಳನ್ನು ಹೇಳುವುದಾಗಿದೆ. ಶರೀರದಲ್ಲಿ ಮೂರು ಆತ್ಮಗಳಿರುವಂತೆ ಮೂರು ದೈವಗ್ರಂಥಗಳಲ್ಲಿಯು ಹೇಳಿದ್ದಾರೆ. ಜೀವಿಗಳು ಮರಣಿಸುತ್ತಲೇ ಪುನಃ ಹುಟ್ಟುತ್ತಿವೆ. ಜೀವಾತ್ಮ ಯಾವ ಶರೀರದಲ್ಲಿ ಇರುತ್ತಾನೊ ಆ ಶರೀರದಲ್ಲಿ ಆತ್ಮ ತಪ್ಪದೆ ಇರುತ್ತಾನೆ. ಜೀವಾತ್ಮ ಕೆಲಸ ಮಾಡಲಾರನು. ಕೆಲಸ ಮಾಡುವವನು ಆತ್ಮ ಮಾತ್ರವೇ. ಆತ್ಮ ಶರೀರದಲ್ಲಿ ಕೆಲಸ ಮಾಡಿದರೆ ಆ ಕೆಲಸದಲ್ಲಿರುವ ಸುಖದುಃಖ ಅನುಭವಗಳನ್ನು ಜೀವಿಯು ಅನುಭವಿಸುತ್ತಿರುತ್ತಾನೆ. ಜೀವಿಯು ಮಾಡಿಕೊಂಡ ಕರ್ಮಗಳನ್ನನುಸರಿಸಿ ಆತ್ಮ ಶರೀರದಲ್ಲಿ ಕೆಲಸಗಳು ಮಾಡಿಸುತ್ತಿರುತ್ತಾನೆ. ಜೀವಿಯು ಅನುಭವಿಸುತ್ತಿರುವಾಗ, ಆತ್ಮ ಕಾರ್ಯಗಳು ಮಾಡುತ್ತಿರುವಾಗ, ಪರಮಾತ್ಮ ಎಲ್ಲವನ್ನು ನೋಡುತ್ತಾ ಸಾಕ್ಷಿಯಾಗಿ ಇದೆ.

ಮನುಷ್ಯನಿಗೆ ಮರಣ ಸಂಭವಿಸಿದ ತಕ್ಷಣ ಆ ಮನುಷ್ಯನೊಂದಿಗೆ ಇರುವ ಜೀವಾತ್ಮವನ್ನು ಆತ್ಮವೇ ತೆಗೆದುಕೊಂಡು ಹೊರಗೆ ಹೋಗುತ್ತಿದೆ. ಶರೀರದಿಂದ ಹೊರಟ ಆತ್ಮ ಎಲ್ಲಿಗಾದರೂ ಹೋಗಬಲ್ಲದು. ಜೀವಾತ್ಮ ಎಲ್ಲಿಗೂ ಸ್ವತಃವಾಗಿ ಹೋಗದವನು. ಯಾವುದು ಕೈಲಾಗದವನು ಜೀವಿ. ಜೀವಾತ್ಮಗೆ ಆತ್ಮ ಜೊತೆಯಾಗಿದ್ದು ಎಲ್ಲಾ ಕೆಲಸಗಳನ್ನು ಮಾಡುತ್ತಿದೆ. ಮರಣದಲ್ಲಿ ಶರೀರದಿಂದ ಹೊಸದಾಗಿ ಹುಟ್ಟಿದ ಶಿಶು ಶರೀರದವರೆಗು ಆತ್ಮವೇ ಜೀವಿಯನ್ನು ತೆಗೆದುಕೊಂಡು ಹೋಗುತ್ತಿದೆ. ಈ ವಿಧವಾಗಿ ಮರಣ ಆದ ನಂತರ ಜನ್ಮ ಉಂಟಾಗುತ್ತಿದೆ. ಮರಣದಲ್ಲಿ ಹಳೆ ಶರೀರದಲ್ಲಿರುವ ಮನಸ್ಸು ಇಲ್ಲದೆ ಹೋಗುತ್ತಿದೆ.

ಮನಸ್ಸು ನಶಿಸಿ ಹೋದರೆ ಹಳೆಶರೀರದಲ್ಲಿನ ಜ್ಞಾಪಕಗಳೆಲ್ಲವೂ ನಶಿಸಿ ಹೋದಂತೆ ಆಗುತ್ತದೆ. ಆದುದರಿಂದ ಹೊಸದಾಗಿ ಹುಟ್ಟಿದ ಶರೀರದಲ್ಲಿನ ಜೀವಾತ್ಮಗೆ ಹಿಂದಿನ ಜ್ಞಾಪಕಗಳು ಯಾವುವು ಇರುವುದಿಲ್ಲ. ಹಾಗೆ ಎಷ್ಟು ಜನ್ಮಗಳು ಬದಲಾದರೂ ಹಿಂದಿನ ಜನ್ಮ ಜ್ಞಾಪಕಗಳು ಇಲ್ಲದಿರುವುದರಿಂದ ಪ್ರಸ್ತುತ ಜನ್ಮದಲ್ಲಿ ಇರುವವನಿಗೆ ಹಿಂದಿನ ಜನ್ಮ ವಿಷಯ ತಿಳಿದಿಲ್ಲ. ಹಾಗೇ ಅದರಹಿಂದಿನ ಜನ್ಮಗಳು ಯಾವುವು ತಿಳಿಯುವುದಿಲ್ಲ. ಆದುದರಿಂದ ಕೃತಯುಗದಲ್ಲಾದರೂ, ತ್ರೇತಾಯುಗದಲ್ಲಾದರೂ, ದ್ವಾಪರ ಯುಗದಲ್ಲಾದರೂ, ಕಲಿಯುಗದಲ್ಲಿ ತಾನು ಪ್ರಸ್ತುತ ಹುಟ್ಟುವಮೊದಲು ಇರುವಂತೆ ತಿಳಿದಿಲ್ಲ. ಆದ್ದರಿಂದ ಆಗ ಇಲ್ಲ, ಈಗಲೇ ಇದ್ದೇನೆ ಎಂದು ಪ್ರತಿ ಮನುಷ್ಯ ಅಂದುಕೊಳ್ಳುವುದು ನಡೆಯುತ್ತಿದೆ. ಕೃತಯುಗದಿಂದ ತನ್ನೊಂದಿಗೆ ಶರೀರದಲ್ಲಿ ನಿವಾಸಿಸುವ ಆತ್ಮ ಪ್ರತಿ ಮರಣದಲ್ಲಿಯೂ ಜನನದವರೆಗು ತೆಗೆದುಕೊಂಡು ಹೋಗುತ್ತಿದೆ. ಆದುದರಿಂದ ಜೀವಿಯೊಂದರ ಪ್ರತಿ ಜನ್ಮ ವಿಷಯ, ಪ್ರತಿ ಮರಣ ವಿಷಯ, ಪ್ರತಿ ಜೀವನವೊಂದರ ವಿಷಯ ಆತ್ಮಗೆ ಗೊತ್ತು. ಆತ್ಮಕ್ಕೆ ಜೀವಿಯ ಗತಜನ್ಮ ವಿಷಯ, ಅದಕ್ಕು ಹಿಂದಿನ ಜನ್ಮಗಳ ವಿಷಯಗಳು ಎಲ್ಲ ತಿಳಿದಿವೆ. ಪ್ರತಿ ಜನ್ಮದಲ್ಲಿಯೂ ಆತನೊಂದಿಗಿದ್ದು ಪ್ರತಿ ಕೆಲಸ ಮಾಡಿರುವುದು ಆತ್ಮವೇ. ಆದುದರಿಂದ ಪ್ರತಿ ಜನ್ಮ ವಿಷಯ ಆತ್ಮಗೆ ಚೆನ್ನಾಗಿ ತಿಳಿದಿದೆ.

ಜೀವಿಯೊಂದಿಗೆ ಎಲ್ಲಾ ಜನ್ಮಗಳಲ್ಲಿಯೂ ಸೃಷ್ಟಿ ಆದಿಯಿಂದ ಆತ್ಮವಿರುವುದರಿಂದ, ಜೀವಿಯ ಪ್ರತಿ ಜನ್ಮ ಆತ್ಮಗೆ ತಿಳಿದಿರುವುದರಿಂದ, ಮೇಲಿನ ಶ್ಲೋಕದಲ್ಲಿ ನಾನು ಮೊದಲಿನಿಂದ ಇದ್ದೇನೆ. ನೀನು ಹಾಗೆಯೇ ಇದ್ದೀಯಾ, ಗತದಲ್ಲಿ ನಾನು ಇಲ್ಲ ಎನ್ನುವುದು ಇಲ್ಲ. ಇದಕ್ಕುಮೊದಲು ನೀನು ಕೂಡಾ ನನ್ನೊಂದಿಗೆ ಇದ್ದೀಯಾ. ನಾನು, ನೀನೇ ಅಲ್ಲ ಲೋಕದಲ್ಲಿನ ರಾಜರು ಸಹಿತವು ಮೊದಲಿನಿಂದ ಇದ್ದಾರೆ. ಗತದಲ್ಲಿ ಹೇಗಿರುವುದು ಯಾರಿಗೂ ತಿಳಿಯದೆ ಹೋದರೂ ಎಲ್ಲರೂ ಇದ್ದಾರೆ. ನಂತರ ಮುಂಬರುವಂತಹ ಕಾಲದಲ್ಲಿ ಕೂಡಾ ಎಲ್ಲರೂ ಇರುತ್ತಾರೆ. ಇಲ್ಲದೆ ಹೋಗುತ್ತೇವೆನ್ನುವ ಸಮಸ್ಯೆಯೇ ಇಲ್ಲ. ಕರ್ಮ

ಇರುವವರೆಗು ಇರಬೇಕಾಗಿದ್ದೆ ಎಂದು ಮೇಲಿನ ಶ್ಲೋಕದಲ್ಲಿ ಕೃಷ್ಣನು ಅರ್ಜುನನೊಂದಿಗೆ ಹೇಳಿದ್ದಾನೆ. ಇಲ್ಲಿ ಹೇಳಿದ ಜ್ಞಾನವನ್ನು ಅನುಸರಿಸಿ ಜೀವಿಗಳಾದ ನಾವು ಸೃಷ್ಟಿ ಆದಿಯಿಂದ ಇದ್ದೇವೆಂದು, ಆ ವಿಷಯಗಳ ಜ್ಞಾಪಕ ಇಲ್ಲದಿರುವುದರಿಂದ ಇದಕ್ಕು ಮೊದಲು ನಾವು ಇಲ್ಲ. ಈಗ ಹುಟ್ಟಿದಾಗಿನಿಂದಲೇ ಇದ್ದೇವೆಂದು ಅಂದುಕೊಳ್ಳುತ್ತಿದ್ದೇವೆ. ಹಾಗೆ ಅಂದುಕೊಳ್ಳುವುದು ತಿಳಿಯದತನವೇ ಯೆಂದು, ಗತ ಜನ್ಮಗಳಲ್ಲಿನ ಮನಸ್ಸು ಆ ಜನ್ಮಗಳಿಂದಲೇ ಮರಣಿಸುವುದರಿಂದ ಕಳೆದ ಜನ್ಮಗಳು ಒಂದು ಕೂಡಾ ಜ್ಞಾಪಕವಿಲ್ಲದೆ ಹೋಗಿದೆಯೆಂದು ಅರ್ಥವಾಗಿದೆ. ಪ್ರಥಮ ದೈವ ಗ್ರಂಥದಲ್ಲಿ ಎರಡನೆ ಶ್ಲೋಕದಲ್ಲಿ ಎಂದರೆ 12ನೇ ಶ್ಲೋಕದಲ್ಲಿ ಇಷ್ಟು ಜ್ಞಾನ ಇದೆ.

**ಶ್ಲೋ॥ 13. ದೇಹಿನೋ ಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ।**
**ತಥಾ ದೇಹಾನ್ತರ ಪ್ರಾಪ್ತಿಃ ಧೀರ ಸ್ತತ್ರನ ಮುಹ್ಯತಿ ॥**

**(ಜೀವಾತ್ಮ)**

**ಭಾವಾರ್ಥ :–** ದೇಹಿಗೆ ದೇಹದಲ್ಲಿ ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ ಕ್ರಮವಾಗಿ ಹೇಗೆ ಉಂಟಾಗುತ್ತವೊ, ಹಾಗೆಯೇ ಶರೀರವನ್ನು ಬಿಟ್ಟುಹೋಗುವು ದೆನ್ನುವ ಮರಣ ಕೂಡಾ ಉಂಟಾಗುತ್ತಿದೆ.

**ವಿವರಣೆ :–** ದೇಹದಲ್ಲಿ ನಿವಾಸಿಸುವುದನ್ನು ದೇಹಿ ಎನ್ನುತ್ತಿದ್ದೇವೆ. ದೇಹದಲ್ಲಿ ಮೂರು ಆತ್ಮಗಳು ನಿವಾಸಿಸುತ್ತಿವೆ. ಒಂದು ಜೀವಾತ್ಮ, ಎರಡನೆಯದು ಆತ್ಮ, ಮೂರನೆಯದು ಪರಮಾತ್ಮ. ಈ ಮೂರನ್ನು ಸಂದರ್ಭಾನುಸಾರವಾಗಿ ಅರ್ಥ ಮಾಡಿಕೊಳ್ಳಬೇಕು ಆದರೆ ಜೀವಾತ್ಮಕ್ಕೆ ಹೇಳಿದಕಡೆ ಆತ್ಮಗೆ, ಆತ್ಮಗೆ ಹೇಳಿದಕಡೆ ಪರಮಾತ್ಮಗೆ, ಪರಮಾತ್ಮಗೆ ಹೇಳಿದಕಡೆ ಜೀವಾತ್ಮಗೆ ಅರ್ಥ ಮಾಡಿಕೊಳ್ಳಬಾರದು. ಬಹಳ ಗೀತೆಗಳಲ್ಲಿ ಈ ಶ್ಲೋಕ ಜೀವಾತ್ಮಗೆ ಹೇಳಿರುವುದೆಂದುಕೊಳ್ಳದೆ ದೇಹಿ ಎನ್ನುತ್ತಲೇ ಆತ್ಮ ಎನ್ನುವ ಪದವನ್ನು ಉಪಯೋಗಿಸಿ ಹೇಳಿದ್ದಾರೆ. ದೇಹಿ ಎನ್ನುತ್ತಲೇ ಒಂದನೆಯದಾ ಅಥವಾ ಎರಡನೆಯದಾ, ಮೂರನೆಯದಾ ಎಂದು

ಪರಿಶೀಲಿಸಿ ನೋಡುತ್ತಿಲ್ಲ. ಇಂತಹ ತಪ್ಪುಗಳು ನಡೆಯುತ್ತವೆಂಬ ಉದ್ದೇಶ ದಿಂದಲೇ ನಾವು ಪ್ರತಿ ಶ್ಲೋಕದ ಪ್ರಕ್ಕದಲ್ಲಿ ಬ್ರಾಕೆಟ್‌ನಲ್ಲಿ ಆ ಶ್ಲೋಕದಲ್ಲಿ ಯಾವುದನ್ನು ಕುರಿತು ಇದೆಯೊ ಅದನ್ನು ಗುರುತಿಸುತ್ತಿದ್ದೇವೆ. ಅರ್ಜುನನು ಮಾನವರಾದ ಜೀವಾತ್ಮಗಳೆನ್ನುವವರನ್ನು ಕುರಿತೇ ಕೇಳಿದ್ದಾನೆ, ದೈವ ಸ್ವರೂಪನಾದ ಆತ್ಮವನ್ನು ಕುರಿತು ಆತನು ಕೇಳಲಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಜೀವಾತ್ಮನನ್ನು ಕುರಿತು ಹೇಳುವುದೇ ನಡೆದಿದೆ.

ಜೀವಾತ್ಮ ಒಂದು ಶರೀರವನ್ನು ಧರಿಸುವಾಗ ಆ ಶರೀರವನ್ನು ಅನುಸರಿಸಿ ಸ್ವಲ್ಪಕಾಲ ಬಾಲ್ಯವೆನ್ನುತ್ತೇವೆ. ಸ್ವಲ್ಪ ಕಾಲ ಕಳೆದಾಗ ವಯಸ್ಸು ಬಂದ ನಂತರ ಶರೀರದಲ್ಲಿರುವ ಜೀವಾತ್ಮಗಳಲ್ಲದೆ ಶರೀರಕ್ಕೆ ಯೌವ್ವನ ಬರುತ್ತದೆ. ಹಾಗೇ ಸ್ವಲ್ಪ ಕಾಲ ಕಳೆದರೆ ಕೌಮಾರ್ಯ, ಇನ್ನೂ ಸ್ವಲ್ಪ ಕಾಲ ಕಳೆದರೆ ವೃದ್ಧಾಪ್ಯ ಶರೀರಕ್ಕೆ ಏರ್ಪಡುತ್ತದೆ. ಆದರೆ ಶರೀರಕ್ಕಿಷ್ಟು ನಡೆಯುತ್ತಿದ್ದರೂ ಒಳಗಿರುವ ಜೀವಾತ್ಮಗೆ ಮಾತ್ರ ವಯಸ್ಸು ಬೆಳೆಯುವುದು ಕಡಿಮೆಯಾಗುವು ದೆನ್ನುವುದು ಇಲ್ಲ. ವಯಸ್ಸು ಬೆಳೆಯುವುದು ಒಂದು ಶರೀರಕ್ಕೆ, ಶರೀರದಲ್ಲಿಯೇ ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ ಮೊದಲಾದ ದಶೆಗಳು ಏರ್ಪಡುತ್ತಿವೆ.

ನಮಗೊಂದು ಕಾರು ಅಥವಾ ಜೀಪು ಇದೆಯೆಂದುಕೊಳ್ಳೋಣ. ಅದು ಚೆನ್ನಾಗಿರುವವರೆಗು ಅದರಲ್ಲಿ ಪ್ರಯಾಣಿಸುತ್ತೇವೆ. ಸ್ವಲ್ಪ ಕಾಲಕ್ಕೆ ಅದರಲ್ಲಿನ ಟೈರ್‌ಗಳು ಸವೆದುಹೋಗುತ್ತವೆ. ಹಾಗೆ ಟೈರ್‌ಗಳು ಕಾರಿಗೆ ಸವೆಯುತ್ತಿವೆ ಆದರೆ, ಅದರಲ್ಲಿ ಕುಳಿತುಕೊಂಡ ವ್ಯಕ್ತಿಗೆ ಕಾಲುಗಳು ಸವೆಯುತ್ತಿಲ್ಲ ಅಲ್ಲವೆ! ಸ್ವಲ್ಪ ಕಾಲಕ್ಕೆ ಟೈರ್‌ಗಳು ಪೂರ್ತಿಯಾಗಿ ಸವೆದುಹೋಗಿ ಅವು ಉರುಳದ ಸ್ಥಿತಿಗೆ ಬಂದು ಗಾಡಿ ನಿಂತುಹೋದಾಗ, ಅದರಲ್ಲಿ ಪ್ರಯಾಣಿಸುತ್ತಿರುವ ವ್ಯಕ್ತಿಗೆ ಏನು ಆಗಲಿಲ್ಲ ಅಲ್ಲವೆ! ಕಾರಿಗೆ ಸವೆದ ಟೈರ್‌ಗಳು ಕೆಲಸಕ್ಕೆ ಬರುವುದಿಲ್ಲವೆಂದು ಅವು ತೆಗೆದುಹಾಕಿ ಬೇರೆ ಹೊಸ ಟೈರ್‌ಗಳನ್ನು ಬದಲಾಯಿಸಿಕೊಳ್ಳುತ್ತೇವೆ. ಟೈರ್‌ಗಳು ಸವೆದಂತೆಲ್ಲಾ ಅದರಲ್ಲಿ ಕುಳಿತುಕೊಂಡವನು ಹೇಗೆ ಸವೆದುಹೋ ಗಲಿಲ್ಲವೊ, ಹಾಗೆ ಶರೀರ ಧರಿಸಿ ಅದನ್ನು ಬಳಸಿಕೊಳ್ಳುತ್ತಿರುವ ಜೀವಾತ್ಮಗೆ

ಶರೀರಕ್ಕೆ ಬಂದಹಾಗೆ ವೃದ್ಧಾಪ್ಯ ಬರುವುದಿಲ್ಲ. ಸವೆದುಹೋದ ಟೈರ್‌ಗಳನ್ನು ಬದಲಾಯಿಸಿ ಹೊಸ ಟೈರ್‌ಗಳನ್ನು ಹಾಕಿಕೊಂಡು ಗಾಡಿಯನ್ನು ನಡೆಸಿ ಕೊಂಡಂತೆ, ಹಳೆಯದಾದ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಹೊಂದಿ ಜೀವಾತ್ಮ ಕಾಲ ಕಳೆದುಕೊಳ್ಳುತ್ತಿದ್ದಾನೆ. ಎಷ್ಟು ಕಾಲ ಕಳೆದರು, ಎಷ್ಟು ವರ್ಷಗಳು ಕಳೆದರು ಜೀವಾತ್ಮ ಎಂದಿನಂತೆ ಇರುತ್ತಾನೆ. ಅವನಲ್ಲಿ ಯಾವ ಬದಲಾವಣೆ ಬರುವುದಿಲ್ಲ. ಒಂದು ಶರೀರವನ್ನು ಧರಿಸಿದಾಗ ಬಡವನಾಗಿ, ಮತ್ತೊಂದು ಶರೀರವನ್ನು ಧರಿಸಿದಾಗ ರಾಜನಾಗಿ ಇರಬಹುದು, ಆದರೆ ಅವನು ಮಾತ್ರ ಇಲ್ಲದೆ ಹೋಗುವುದು ಅಸತ್ಯ. ಆದ್ದರಿಂದಲೇ ಭಗವಂತನು ನೀನಾಗಲಿ, ಈ ರಾಜರಾಗಲಿ ಇಲ್ಲದೆ ಹೋಗುತ್ತಾರೆನ್ನುವುದು ಇಲ್ಲ ಎಂದಿದ್ದಾನೆ. ಇಲ್ಲೊಂದು ಸಂದೇಹ ಕೆಲವರಿಗೆ ಬಂದು, ಇದು ಸಾಮಾನ್ಯ ಜೀವಾತ್ಮಗಳಿಗೆ ಅನ್ವಯಿಸುವ ಸೂತ್ರ, ಭಗವಂತನಾದ ಶ್ರೀಕೃಷ್ಣನು ನಾನು ಕೂಡಾ ಎಂದು ಹೇಳುತ್ತಾ ನಾವೆಲ್ಲರೂ ಇಲ್ಲದಂತೆಹೋಗುವುದಿಲ್ಲ ಎಂದಾಗ, ದೇವರಿಗು ಕೂಡಾ ಈ ಸೂತ್ರ ಅನ್ವಯಿಸುತ್ತದಾ! ಎಂದು ಕೇಳಬಹುದು. ಅದಕ್ಕೆ ಸಮಾಧಾನ ದೇವರಾದವನು ಕೂಡಾ ಸಾಮಾನ್ಯ ಮಾನವನಂತೆ ಶರೀರ ಧರಿಸಿದ್ದಾನೆ. ಆದ್ದರಿಂದ ಸರ್ವ ಶರೀರಗಳಿಗು ಅನ್ವಯಿಸುವ ಸೂತ್ರದ ಪ್ರಕಾರ ತನನ್ನು ಕೂಡಾ ಸೇರಿಸಿಕೊಂಡು ಹೇಳಿದ್ದಾನೆ. ಅದೂ ಅಲ್ಲದೆ ತಾನು ದೈವವಾದ್ದರಿಂದ ಎಂದಿಗೂ ಇರುವವನೇ, ಆದ್ದರಿಂದ ತಾನು ಕೂಡಾ ಎಂದಿಗೂ ಇರುವವನಂತೆ ಹೇಳಿದ್ದಾನೆ.

ಇಲ್ಲಿ ಮತ್ತೊಂದು ಪ್ರಶ್ನೆ ಬರಬಹುದು. ಜೀವಾತ್ಮ ಜ್ಞಾನ ತಿಳಿದುಕೊಂಡು ಮೋಕ್ಷ ಹೊಂದಿ ಜೀವಾತ್ಮನಾಗಿ ನಶಿಸಿಹೋಗಿ ಪರಮಾತ್ಮನಾಗಿ ಬದಲಾದಾ ಗಾದರೂ ಜೀವಾತ್ಮಗೆ ನಾಶವಿದೆ ಅಲ್ಲವೆ! ಆ ಉದ್ದೇಶದಿಂದಲೇ ಅಲ್ಲವೆ ಜೀವಾತ್ಮನನ್ನು ಕ್ಷರನೆಂದಿದ್ದಾರೆ (ನಾಶವಾಗುವವನೆಂದಿದ್ದಾರೆ) ಹಾಗೆ ಪರಮಾತ್ಮ ನಲ್ಲಿ ಸೇರಿಹೋದಾಗ ಜೀವಾತ್ಮ ನಾಶವಾಗಿ ಹೋದವನೇ ಅಲ್ಲವೆ! ಆಗ ಅವನು ಇಲ್ಲದೆ ಹೋಗುತ್ತಿದ್ದಾನೆ ಅಲ್ಲವೆ! ಹಾಗಿರುವಾಗ ಎಂದಿಗೂ ಇಲ್ಲದೆ ಹೋಗುತ್ತಾನೆನ್ನುವುದು ಇಲ್ಲ ಎನ್ನುವುದರಲ್ಲಿ ದೊಡ್ಡತನವೇನೆಂದು ಕೇಳಬಹುದು.

ಅದಕ್ಕೆ ನಮ್ಮ ಸಮಾಧಾನವೇನೆಂದರೆ! ಇಲ್ಲಿ ಶ್ಲೋಕದಲ್ಲಿ ಹೇಳಿರುವುದು ಜೀವಿಗಳಿಗೇ ಆದರೂ, ಅದು ಕೇವಲ ಅಜ್ಞಾನದಲ್ಲಿ ಇರುವವರಿಗೆ ಮಾತ್ರ ಹೇಳುತ್ತಿರುವ ವಿಷಯ. ಸರ್ವಸಾಧಾರಣ ಜೀವಿಗಳ ಕುರಿತಾದ ವಿಷಯ ಹೊರತು ಇತರೆ ಅಲ್ಲವೆಂದು ತಿಳಿಯಬೇಕು. ಏಕೆಂದರೆ! ಶರೀರಗಳು ನಶಿಸಿದಾಗ ಅಂದರೆ ಸಾಯಿಸಲ್ಪಟ್ಟಾಗ ಅಥವಾ ಮರಣ ಹೊಂದಿದಾಗ ಅದರಲ್ಲಿರುವ ಜೀವಿಯು ಕೂಡಾ ನಾಶವಾಗುತ್ತಾನೇನೊ ಎನ್ನುವ ಅರ್ಜುನನ ಅನುಮಾನಕ್ಕೆ ತಕ್ಕಂತೆ ಶರೀರ ಬದಲಾವಣೆಯಲ್ಲಿ ಜೀವಾತ್ಮ ನಶಿಸುವುದಿಲ್ಲವೆಂದು ಹೇಳಲ್ಪಟ್ಟಿದೆ. ಇದು ಒಂದು ಶರೀರ ಬದಲಾವಣೆ ಬಗ್ಗೆ ಶರೀರ ನಾಶಿಸಿದಾಗ ಜೀವಾತ್ಮವೊಂದರ ಸ್ಥಿತಿಯನ್ನು ಕುರಿತು ಹೇಳಿರುವುದು. ಮೊದಲು ಶ್ಲೋಕಗಳಲ್ಲಿ ಕರ್ಮ ನಾಶವಾದಾಗ ಜೀವಾತ್ಮ ಪೂರ್ತಿ ನಶಿಸಿ ಹೋಗುತ್ತಾನೆ, ಆದ್ದರಿಂದ ಜೀವಾತ್ಮ ಕ್ಷರನು ಎನ್ನಲ್ಪಡುತ್ತಿದ್ದಾನೆ.

ಈ ಶ್ಲೋಕದಲ್ಲಿ ಮುಖ್ಯವಾಗಿ ಮೂರು ಆತ್ಮಗಳಲ್ಲಿ ಕೇವಲ ಒಂದು ಜೀವಾತ್ಮನನ್ನು ಕುರಿತು ಹೇಳಲ್ಪಟ್ಟಿದೆಯೆಂದು ಮತ್ತು ಶರೀರ ಪತನ ನಡೆದಾಗ ಶರೀರ ಮಾತ್ರ ಹೋಗಿ, ಜೀವಾತ್ಮ ಹೋಗದೆ ಎಲ್ಲಿಯೋ ಒಂದುಕಡೆ ಇರುತ್ತಾನೆಂದು ತಿಳಿಯಪಡಿಸಿದೆ. ಇದು ಶರೀರ ಪತನದ ಬಗ್ಗೆ ಜೀವಾತ್ಮನ ಬದಲಾವಣೆಯನ್ನು ಕುರಿತು ಹೇಳಿರುವುದೆ ಹೊರತು ಕರ್ಮಪತನದ ಬಗ್ಗೆ ಹೇಳಿರುವುದು ಅಲ್ಲವೆಂದು ತಿಳಿಯಬೇಕು. ಅದೂ ಬಹಳ ಭಗವದ್ಗೀತೆಗಳಲ್ಲಿ ಎಷ್ಟೋಜನ ಬರೆದಂತೆ ಈ ಶ್ಲೋಕ ಆತ್ಮಗೆ ಅಲ್ಲ ಕೇವಲ ಜೀವಾತ್ಮಗೆಂದು ತಿಳಿಯಬೇಕು.

ಸರಿ! ಈ ವಿಷಯ ತಿಳಿದ ನಂತರ ಅರ್ಜುನನು ಅಥವಾ ನಾವು ಅಥವಾ ಇನ್ನೊಬ್ಬ ವ್ಯಕ್ತಿ ಅಥವಾ ನಮ್ಮ ಮನೆಯಲ್ಲಿ ಅವನಿಗೆ ಶರೀರ ದಶೆಗಳೆಲ್ಲ ನಡೆದುಹೋದಾಗ ಇವನು ಶರೀರವನ್ನು ಮಾತ್ರ ಬಿಟ್ಟುಹೋಗಿದ್ದಾನೆ, ಇವನು ನಾಶಹೊಂದಲಿಲ್ಲ, ಇವನು ಇದ್ದಾನೆ, ಅವನಿಗೋಸ್ಕರ ಏಕೆ ಅಳಬೇಕು? ಎಂದು ತಿಳಿದರೂ ನಮಗೆ ಪರಿಚಯವಿರುವ ಈ ಶರೀರವನ್ನು ಬಿಟ್ಟು ಹೋಗಿದ್ದಾನೆ

ಅಲ್ಲವೆ! ಎಂದೊ ಅಥವಾ ಅವನು ನಮ್ಮ ಹತ್ತಿರವಿಲ್ಲದೆ ಈ ಶರೀರವನ್ನು ಬಿಟ್ಟು ಎಲ್ಲಿಗೊ ಹೋಗಿದ್ದಾನೆ ಅಲ್ಲವೆ! ಇನ್ನು ಅವನಿದ್ದರೂ ಅವನು ಎಲ್ಲಿರುವುದು ನಮಗೆ ತಿಳಿದಿಲ್ಲ ಅಲ್ಲವೆ! ಎಂದು ಅಷ್ಟೋ ಇಷ್ಟೋ ದುಃಖ ಪಡುತ್ತೇವೆ. ಅವನು ಮರಣಿಸಿದ್ದಾನೆಂದು ಅಲ್ಲ, ಅವನು ದೂರವಾಗಿದ್ದಾನೆಂದು ಅಳುತ್ತಿದ್ದೇವೆಂದು ತಿಳಿದವರು ಅನ್ನುತ್ತಿರುವುದು ಕೂಡಾ ಕೇಳಬಹುದು.

ಪ್ರಥಮ ದೈವ ಗ್ರಂಥದಲ್ಲಿ ಮೊದಲ ಮೂರು ಶ್ಲೋಕಗಳೊಂದರ ಜ್ಞಾನವನ್ನು ಇಲ್ಲಿಯವರೆಗು ತಿಳಿದುಕೊಂಡಿದ್ದೇವೆ. ಬಹಳ ವಿಷಯಗಳಲ್ಲಿ ಮೊದಲು ಕೊನೆಯಲ್ಲಿ ಮುಖ್ಯವಾದ ವಿಷಯಗಳಿರುತ್ತವೆ ಎಂದು ಹಿರಿಯರು ಹೇಳುತ್ತಿರುತ್ತಾರೆ. ಆದ್ದರಿಂದ ಭಗವದ್ಗೀತೆವೊಂದರ ಮೊದಲ ಮೂರು ಶ್ಲೋಕಗಳನ್ನು ಗಮನಿಸಿದರೆ ಮೂರು ಶ್ಲೋಕಗಳಲ್ಲಿ ಪ್ರತ್ಯೇಕವಾದ ಉತ್ತಮ ಜ್ಞಾನ ತಿಳಿಯಲ್ಪಟ್ಟಿದೆ. ಮೂರು ಶ್ಲೋಕಗಳನ್ನು ಪ್ರತ್ಯೇಕವಾಗಿ ನೋಡದೇ, ಗ್ರಂಥದೊಂದಿಗೆ ಎಲ್ಲಾ ಶ್ಲೋಕಗಳನ್ನು ಓದಿದ್ದರೆ ಈಗ ತಿಳಿದ ಪ್ರತ್ಯೇಕವಾದ ಜ್ಞಾನ ತಿಳಿಯುತ್ತಿರಲಿಲ್ಲ. ಇಲ್ಲಿಯವರೆಗು ಪ್ರಥಮ ದೈವ ಗ್ರಂಥವಾದ ತೌರಾತು ಗ್ರಂಥದಲ್ಲಿನ ಮೊದಲ ಮೂರು ಶ್ಲೋಕಗಳನ್ನು ಮೂರು ವಾಕ್ಯಗಳಾಗಿ ನೋಡಿದ್ದೇವೆ. ಈಗ ದ್ವಿತೀಯ ದೈವಗ್ರಂಥವಾದ ಇಂಜೀಲು ಗ್ರಂಥದಲ್ಲಿ (ಬೈಬಲ್‌ನಲ್ಲಿ) ಪ್ರಥಮ ವಾಕ್ಯಗಳು ಮೂರನ್ನು ನೋಡೋಣ.

ದ್ವೀತಿಯ ದೈವಗ್ರಂಥವನ್ನು ಇಂಜೀಲು ಎಂದೂ ಅಥವಾ ಬೈಬಲ್ ಎಂದೂ ಕರೆಯುತ್ತಿದ್ದೇವೆ. ಈ ಗ್ರಂಥ ಹಳೆನಿಬಂಧನ ಹೊಸ ನಿಬಂಧನೆಯೆಂದು ಎರಡು ಭಾಗಗಳಾಗಿರುವಂತೆ ಎಲ್ಲರಿಗೂ ತಿಳಿದಿದೆ. ಹಳೆನಿಬಂಧನೆ 39 ಪಾಠಗಳಾಗಿ, ಹೊಸ ನಿಬಂಧನೆ 27 ಪಾಠಗಳಾಗಿ ಇದೆ. ಹೊಸ ನಿಬಂಧನ ಮೊದಲ ನಾಲ್ಕು ಪಾಠಗಳು ಎಲ್ಲದಕ್ಕಿಂತ ಪ್ರತ್ಯೇಕವಾದ ಹೆಸರುಗಳು ಹೊಂದಿವೆ. ನಾಲ್ಕು ಪಾಠಗಳು ನಾಲ್ಕು ಸುವಾರ್ತೆಗಳೆನ್ನುವ ಹೆಸರಿನಿಂದಿರುವಾಗ, ಉಳಿದ 62 ಪಾಠಗಳಿಗೆ ಸುವಾರ್ತೆಗಳೆನ್ನುವ ಹೆಸರಿಲ್ಲ. ನಾಲ್ಕು ಸುವಾರ್ತೆಗಳಲ್ಲಿ ಯೇಸು ಸ್ವತಃವಾಗಿ ಮಾತನಾಡಿದ ಮಾತುಗಳು, ಹೇಳಿದ ಬೋಧನೆ ಇದೆ. ಉಳಿದ

62 ಪಾಠಗಳಲ್ಲಿ ಮನುಷ್ಯರು ಹೇಳಿದ ಮಾತುಗಳು, ಬೋಧನೆಗಳು ಇವೆ. 62 ಪಾಠಗಳಲ್ಲಿ ಎಲ್ಲಾ ಜ್ಞಾನವಿದೆಯೆಂದು ಹೇಳಲಾರೆವು. ಕೆಲವುಕಡೆ ಜ್ಞಾನವಿದ್ದರೂ ಕೆಲವುಕಡೆ ಅಜ್ಞಾನ ಕೂಡಾ ಜ್ಞಾನದಲ್ಲಿ ಬೆರೆತಿದೆ. ತಿಳುವಳಿಕೆಯುಳ್ಳವರು 62 ಪಾಠಗಳಲ್ಲಿ ಎಷ್ಟೋ ಬುದ್ಧಿಯನ್ನು ಉಪಯೋಗಿಸಿ ಜ್ಞಾನವನ್ನು ಹುಡಿಕಿ ಕೊಳ್ಳಬೇಕಾಗಿದೆ. ನಾಲ್ಕು ಸುವಾರ್ತೆಗಳಲ್ಲಿ ಸ್ವತಃವಾಗಿ ಯೇಸುಪ್ರಭುವು ಹೇಳಿದ ಜ್ಞಾನ ಇರುವುದರಿಂದ, ಅದೆಲ್ಲವೂ ಸ್ವಚ್ಛವಾದ ಜ್ಞಾನವೆಂದೇ ಹೇಳಬಹುದು. ಅದರಲ್ಲಿ ಹುಡುಕಬೇಕಾಗಿರುವುದು ಏನೂ ಇಲ್ಲ. ಆದರೆ ಈಗ ಮೂರು ಗ್ರಂಥಗಳಲ್ಲಿನ ಮೂರು ಪ್ರಥಮ ವಾಕ್ಯಗಳನ್ನು ಪ್ರತ್ಯೇಕವಾಗಿ ನೋಡುತ್ತಿದ್ದೇವೆ. ಆದ್ದರಿಂದ ಮೊದಲೇ ಗ್ರಂಥದಲ್ಲಿ ಯಾವುವು ಮೊದಲ ವಾಕ್ಯಗಳೆಂದು ಗುರುತಿಸಿಕೊಂಡಿದ್ದೇವೆ. ಇಂಜೀಲು ಗ್ರಂಥದಲ್ಲಿರುವ ನಾಲ್ಕು ಸುವಾರ್ತೆಗಳೇ ನಿಜವಾದ ಭಗವಂತನು ಹೇಳಿದ ಜ್ಞಾನವಾಗಿರುವುದರಿಂದ, ಮೂರು ಪ್ರಥಮ ವಾಕ್ಯಗಳಾಗಿ ಯೋಹಾನ್ ಸುವಾರ್ತೆಯಲ್ಲಿನ ಮೂರು ಮೊದಲ ವಾಕ್ಯಗಳನ್ನು ತೆಗೆದುಕೊಂಡು ನೋಡಿದ್ದೇವೆ.

ಈದಿನ ಮನುಷ್ಯರು ಮೂರು ಮತಗಳಾಗಿ ಇರುವುದರಿಂದ, ಮನುಷ್ಯರ ಹುಟ್ಟಿನಿಂದಲೇ ಅವರಲ್ಲಿ ಅವರ ತಾಯಿತಂದೆಯರ ಮತ ಸೇರಿಹೋಗುತ್ತಿದೆ. ಬರ್ತ್ ಸರ್ಟಿಫಿಕೆಟ್‌ನಲ್ಲಿ (ಜನನ ಧೃಢೀಕರಣ ಪತ್ರದಲ್ಲಿ) ಇಂತಹ ತಾಯಿ ತಂದೆಯರು, ಇಂತಹ ಮತ, ಇಂತಹ ಹೆಸರು ಎಂದು ಬರೆಯಿಸುವುದು ನಡೆಯುತ್ತಿದೆ. ಇದರಿಂದ ಜನ್ಮದಿಂದಲೇ ಮತ ಮನುಷ್ಯನಿಗೆ ಅಂಟಿಕೊಂಡು ಹೋಗುತ್ತಿದೆ. ಮನುಷ್ಯನ ವಯಸ್ಸು ಬೆಳೆದಂತೆಲ್ಲ ಮನುಷ್ಯನೇ ಮತಕ್ಕೆ ಅಂಟಿಕೊಂಡುಹೋಗುತ್ತಿದ್ದಾನೆ. ಹತ್ತು ವರ್ಷಗಳಿಗೇ ನನ್ನದು ಇಂತಹ ಮತ ಎಂದು ಅನ್ನುತ್ತಿದ್ದಾನೆ. ಮೊದಲು ಏನು ತಿಳಿಯದ ಚಿಕ್ಕವಯಸ್ಸಿನಲ್ಲಿ ಮತ ಮನುಷ್ಯನನ್ನು ಅಂಟಿಕೊಂಡರೆ, ಮನುಷ್ಯ ದೊಡ್ಡವನಾದ ನಂತರ ಮನುಷ್ಯನೇ ಮತಕ್ಕೆ ಅಂಟಿಕೊಂಡು ಹೋಗುತ್ತಿದ್ದಾನೆ. ಮತ ಮನುಷ್ಯನಲ್ಲಿ ಸೇರಿದರೂ, ಮನುಷ್ಯ ಹೋಗಿ ಮತದಲ್ಲಿ ಸೇರಿದರೂ, ಮನುಷ್ಯನಲ್ಲಿ ಮತ ನೂರು ಪಾಲು

ಇದ್ದಂತೆ. ಮನುಷ್ಯನಲ್ಲಿ ಮತ ಎಷ್ಟಿದ್ದರೂ ಜ್ಞಾನ ತಿಳಿಯುವ ಮನುಷ್ಯನಲ್ಲಿ ಮತ ಅಡಗಿಕೊಂಡು ಕೊನೆಗೆ ಇಲ್ಲದೆ ಹೋಗುತ್ತದೆ. ಜ್ಞಾನ ತಿಳಿಯದ ಮನುಷ್ಯನಲ್ಲಿ ಮತ ಕಾಲಸರ್ಪದಂತೆ ಬುಸುಗುಟ್ಟುತ್ತಿರುತ್ತದೆ. ಅದು ಎಷ್ಟು ಜನರನ್ನಾದರೂ ಕಚ್ಚಬಲ್ಲದು. ಕೋರೆಗಳಲ್ಲಿ ವಿಷ ಊರಿದಂತೆಲ್ಲ ಕಚ್ಚಬೇಕೆಂದು ನೋಡುವಂತೆ, ಮತ ನಿತ್ಯ ಪರಮತದವರ ಮೇಲೆ ದ್ವೇಷ ಬೆಳೆಸುತ್ತಾ, ಪರಮತಸ್ಥರನ್ನು ಹಿಂಸಿಸಬೇಕೆಂದು ಪ್ರೇರೆಪಿಸುತ್ತಿರುತ್ತದೆ. ಮತ ಪ್ರೇರಣಯಿಂದ ಮನುಷ್ಯ ವಿಚಕ್ಷಣ ಕಳೆದುಕೊಂಡು ಸ್ವಮತ ಅಭಿವೃದ್ಧಿ, ಪರಮತ ನಾಶವನ್ನು ಕೋರುತ್ತಿರುತ್ತಾನೆ. ಈದಿನ ನಡೆಯುವ ಹಿಂಸೆಗಳೆಲ್ಲ ಮತ ದ್ವೇಷಕ್ಕೆ ಸಂಬಂಧಿಸಿರುವವೇ. ಮತ ಎನ್ನುವುದು ಮನುಷ್ಯ ಸೃಷ್ಟಿಸಿಕೊಂಡ ಅಧರ್ಮ ಎಂದು ಹೇಳಬಹುದು.

ಮನುಷ್ಯನಲ್ಲಿ ಮತ ಇರುವುದರಿಂದ, ಒಬ್ಬ ಮತಸ್ಥನು ಇನ್ನೊಬ್ಬ ಮತಸ್ಥನಿಗೆ ಕೆಟ್ಟದ್ದು ಮಾಡಬೇಕೆಂದು ನೋಡುತ್ತಿರುತ್ತಾನೆ. ಆದರೆ ಮನುಷ್ಯ ಜ್ಞಾನವನ್ನು ತಿಳಿಯಲ್ಪಟ್ಟರೆ, ದೇವರ ಜ್ಞಾನದ ಮೇಲೆ ಶ್ರದ್ಧೆ ಮನುಷ್ಯನಲ್ಲಿದ್ದರೇ, ಇತರರು ಹೇಳುವ ದೈವಜ್ಞಾನವನ್ನು ಇಷ್ಟವಾಗಿ ಕೇಳಿಸಿಕೊಂಡರೆ ಮನುಷ್ಯನಲ್ಲಿರುವ ಮತ ಕೆಲಸ ಮಾಡುವುದಿಲ್ಲ. ಜ್ಞಾನದಿಂದ ಮತ ಅಡಗಿಹೋಗಬಲ್ಲದು. ಜ್ಞಾನ ತಿಳಿಯದ ಮನುಷ್ಯನಲ್ಲಿ ಮತ ಹೇಗಿದೆಯೋ, ಜ್ಞಾನ ತಿಳಿಯುವ ಮನುಷ್ಯನಲ್ಲಿ ಮತ ಹೇಗೆ ಅಡಕವಾಗಿ ಹೋಗುತ್ತಿದೆಯೋ ತಿಳಿಯುವುದಕ್ಕೆ ನಡೆದ ಯಥಾರ್ಥ ಸಂಘಟನೆಗಳನ್ನು ತೆಗೆದುಕೊಂಡು ನೋಡೋಣ. ಈಗ ಗೋದಾವರಿ ಪುಷ್ಕರಗಳು, ಕೃಷ್ಣಾನದಿ ಪುಷ್ಕರಗಳು ನಡೆಯುತ್ತಿವೆ. ಹೈದರಾಬಾದ್ ರೂಟ್‌ನಲ್ಲಿ ಮಹಬೂಬ್‌ನಗರ್ ಜಿಲ್ಲೆ ಬೀಚುಪಲ್ಲಿ ಹತ್ತಿರ ಕೃಷ್ಣಾನದಿ ಪುಷ್ಕರಗಳು ನಡೆಯುತ್ತಿವೆ 13–08–2016 ದಿನದಂದು ನಮ್ಮ ಭಕ್ತರು ಕೆಲವರು ನಾವು ರಚಿಸಿದ ಭಗವದ್ಗೀತೆ ಮತ್ತೆ ಕೆಲವು ಗ್ರಂಥಗಳನ್ನು ಅಲ್ಲಿ ಪ್ರಚಾರ ಮಾಡುವುದು ನಡೆದಿದೆ. ಮಹಬೂಬ್‌ನಗರ್ ಜಿಲ್ಲೆ ಭಕ್ತರೇ ಅಲ್ಲಿ ಆಧ್ಯಾತ್ಮಿಕ ಗ್ರಂಥಗಳನ್ನು ಪ್ರಚಾರ ನಿಮಿತ್ತ ಇಟ್ಟುಕೊಳ್ಳುವುದು ನಡೆದಿದೆ. ಆಗ ವಿಶ್ವಹಿಂದೂಪರಿಷತ್ ಎಂದು

ಹೇಳಿಕೊಳ್ಳುವವರು ಹತ್ತುಜನರವರೆಗು ಬಂದು ಗ್ರಂಥಗಳನ್ನು ಪ್ರಚಾರ ಮಾಡಬಾರದು ಎಂದು ಹೇಳಿ ಗ್ರಂಥಗಳನ್ನು ಇಷ್ಟಬಂದಂತೆ ಬಿಸಾಡುವುದು ನಡೆದಿದೆ. ನೀವು ಏಕೆ ಹಾಗೆ ಮಾಡುತ್ತಿದ್ದೀರೆಂದು ನಮ್ಮ ಭಕ್ತರು ಅವರನ್ನು ಪ್ರಶ್ನಿಸಿದಾಗ ತ್ರೈತ ಎಂದರೆ ಅದು ಕ್ರೈಸ್ತರಿಗೆ ಸಂಬಂಧಿಸಿರುವುದೆಂದು ನಮಗೆ ಗೊತ್ತು ನೀವು ತ್ರೈತ ಸಿದ್ಧಾಂತ ಎನ್ನುವ ಹೆಸರಿನಿಂದ ಗ್ರಂಥಗಳನ್ನು ಪ್ರಚಾರ ಮಾಡುತ್ತಿದ್ದೀರ. ತ್ರೈತ ಸಿದ್ಧಾಂತ ಭಗವದ್ಗೀತೆಯೆಂದು ಹೆಸರಿಟ್ಟುಕೊಂಡು ಕ್ರೈಸ್ತವವನ್ನು ಪ್ರಚಾರ ಮಾಡುತ್ತಿದ್ದಾರೆಂದು ಆರೋಪಣೆ ಮಾಡಿ ದೌರ್ಜನ್ಯ ಮಾಡಿದ್ದಾರೆ.

ನಾವು ಹಿಂದೂಗಳು, ಹಿಂದೂ ಗುರುವು ಪ್ರಬೋಧಾನಂದ ಯೋಗೀಶ್ವರರು ಬರೆದ ಭಗವದ್ಗೀತೆ ಇದು. ನಮ್ಮ ಹತ್ತಿರ ನಮ್ಮ ಗುರುಗಳು ಬರೆದ 76 ಗ್ರಂಥಗಳಿವೆ. ಅದರಲ್ಲಿ **"ಮತ ಮಾರ್ಪಾಡು ದೈವದ್ರೋಹ- ಮಹಾ ಪಾಪ"** ಎನ್ನುವ ಗ್ರಂಥವಿದೆ ನೋಡಿರಿ. ಇನ್ನೂ ಎಷ್ಟೋ ಹಿಂದೂ ಧರ್ಮಗಳಿಗೆ ಸಂಬಂಧಿಸಿದ ಗ್ರಂಥಗಳು ಇವೆ. ನಮ್ಮ ಪ್ರಚಾರವೆಲ್ಲಾ ಭಗವದ್ಗೀತೆ ಪ್ರಚಾರವೇ. ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳಂತೆ ನಮ್ಮ ಗುರುಗಳದ್ದು ತ್ರೈತ ಸಿದ್ಧಾಂತ. ತ್ರೈತ ಸಿದ್ಧಾಂತ ಹಿಂದೂಮತ ಸಿದ್ಧಾಂತಗಳಲ್ಲಿ ಒಂದು ಸಿದ್ಧಾಂತವೆಂದು ಎಷ್ಟು ಹೇಳಿದರೂ ಅವರು ಸ್ವಲ್ಪವೂ ಕೇಳದಂತೆ ಗ್ರಂಥಗಳನ್ನು ತೆಗೆದುಹಾಕಬೇಕೆಂದು ಬೆದರಿಸಿ, ಗ್ರಂಥಗಳೆಲ್ಲ ತೆಗೆದುಕೊಂಡು ಹೋಗಿ ಪೊಲೀಸ್ ಸ್ಟೇಷನ್‌ನಲ್ಲಿ ಇವರು ಇತರ ಮತಸ್ಥರು, ಇವರ ಮೇಲೆ ಕೇಸು ಬುಕ್ ಮಾಡಿರಿ. ಪರಮತ ಪ್ರಚಾರ ಮಾಡುತ್ತಿದ್ದಾರೆಂದು ಕೇಸು ಬರೆಯಿರಿ ಎಂದು ಹೇಳಿದ್ದಾರೆ. ಅದಕ್ಕು ಮೊದಲು ಸ್ವಲ್ಪ ಕಾಲದಿಂದ ನಮ್ಮ ಗ್ರಂಥಗಳನ್ನು ಅಲ್ಲಿನ ಪೊಲೀಸ್‌ನವರು ಓದಿರುವುದರಿಂದ ಸ್ವತಃವಾಗಿ ಡಿ.ಯಸ್.ಪಿ ಜೋಕ್ಯ ಮಾಡಿಕೊಂಡು "ನೀವು ತಪ್ಪಾಗಿ ತಿಳಿಯುತ್ತಿದ್ದೀರಾ ಅವರು ಹಿಂದೂಗಳೇ, ಆ ಗ್ರಂಥಗಳು ಹಿಂದೂ ಗ್ರಂಥಗಳೇ ನಾವು ಇದಕ್ಕೂ ಮೊದಲೇ ಓದಿದ್ದೇವೆ" ಎಂದು ಹೇಳಿದರೂ ಅವರು ಕೇಳದಂತೆ ನೀವು ಯಾಕ್ಷನ್ ತೆಗೆದುಕೊಳ್ಳುತ್ತೀರಾ, ನಮ್ಮನ್ನು

ತೆಗೆದುಕೊಳ್ಳಬೇಕೆನ್ನುತ್ತೀರಾ ಎಂದು ಪೋಲೀಸ್‌ನವರನ್ನೇ ಬೆದರಿಸಿದ್ದಾರೆ. ಈ ವಿಷಯವೆಲ್ಲಾ ತಿಳಿದ ನಾವು ನಮ್ಮವರನ್ನು ಪ್ರಚಾರ ನಿಲ್ಲಿಸಿ ಮನೆಗೆ ಹೋಗಲು ಹೇಳಿದ್ದೇವೆ. ಅಲ್ಲಿಗೆ ಆ ಸಮಸ್ಯೆ ಬಗೆಹರಿದಿದೆ.

ಇದೆಲ್ಲವೂ ಗಮನಿಸಿದರೆ ಹಿಂದೂಗಳಲ್ಲಿ ಕೆಲವರಲ್ಲಿ ಮತ ಎನ್ನುವುದು ಗಾಢವಾಗಿ ಅಂಟಿಕೊಂಡುಹೋಗಿ ಅದರ ಕಣ್ಣಿಗೆ ತನ್ನ ಪರ ಎನ್ನುವ ಭೇದ ಕೂಡಾ ತಿಳಿಯದೆ ಹೋಗಿದೆ. ಬಣ್ಣದ ಕನ್ನಡಕವನ್ನು ಧರಿಸಿದವನಿಗೆ ಲೋಕವೆಲ್ಲಾ ಅದೇ ಬಣ್ಣ ಕಾಣಿಸಿದಂತೆ ಮತ ಎನ್ನುವುದು ತಲೆಯಲ್ಲಿರುವಾಗ ಹಿಂದೂ ಮತದಲ್ಲಿ ಎಷ್ಟೋ ದೊಡ್ಡ ಹೆಸರುವಾಸಿಯಾದ ನಮ್ಮ ಗ್ರಂಥಗಳು ಕೂಡಾ ಅವರಿಗೆ ಪರಮತವಾಗಿ ಕಾಣಿಸಿವೆ ಎಂದರೆ ಹಿಂದೂಮತಕ್ಕೇ ಎಷ್ಟೋ ನಾಚಿಕೆಗೇಡು. ಮೇಲೆ ಪೈಸಾಜ್ಞಾನ ಕೂಡಾ ಇಲ್ಲದವರು ವಿಶ್ವಹಿಂದೂಗಳೆಂದು ಹೆಸರಿಟ್ಟುಕೊಂಡು ಕೊನೆಗೆ ಹಿಂದೂಮತದಲ್ಲಿನ ರಚನೆಗಳನ್ನೇ ಗುರುತಿಸದೆ ಅವುಗಳನ್ನು ಕುರುಡರಂತೆ ಪರಮತವೆಂದು ಹೇಳುವುದು ಕೇವಲ ಅವರಲ್ಲಿರುವ ಮತದ್ವೇಷವೇ ಆ ಕೆಲಸ ಮಾಡಿಸಿದೆಯೆಂದು ಅಂದುಕೊಳ್ಳುತ್ತೇವೆ. ಹೇಳಿದರೆ ಸ್ವಲ್ಪವಾದರೂ ಕೇಳಿ ನಂತರ ಅವರು ಆರೋಪಣೆ ಮಾಡಬಹುದು. ಇಲ್ಲದಿದ್ದರೆ ಗ್ರಂಥಗಳು ಓದಿ ಅದರಲ್ಲಿ ಏನಾದರೂ ಪರಮತಕ್ಕೆ ಸಂಬಂಧಿಸಿರುವುದಿದ್ದರೆ ತಪ್ಪು ಹಿಡಿದು ಮಾತನಾಡಬಹುದು. ಹೇಳಿದರೆ ಕೇಳುವುದಿಲ್ಲ, ಓದಿರೆಂದರೆ ಓದುವುದಿಲ್ಲ ಅಂಥವರಲ್ಲಿ ಮತ ಅಡಗಿ ಹೋಗುವುದಿಲ್ಲ. ಜ್ಞಾನದ ಮೇಲೆ ಶ್ರದ್ಧೆಯಿದ್ದು ಜ್ಞಾನವನ್ನು ಕೇಳಿದರೆ ಮನುಷ್ಯನಲ್ಲಿನ ಮತ ಅಡಗಿ ಹೋಗುತ್ತದೆಂದು ಹೇಳಿದ್ದೇವೆ. ಹಾಗೆ ಜ್ಞಾನವೇ ನಮಗೆ ಬೇಡ ನಮಗೆ ಮತವೇ ಬೇಕು ಎನ್ನುವವರಿಗೆ ಏನು ಹೇಳಲಾರೆವು. ಅವರು ಮತ ಎನ್ನುವ ಅಧರ್ಮದಲ್ಲಿ ಆಳವಾಗಿ ಸೇರಿ ಹೋಗಿದ್ದಾರೆ.

ನಮ್ಮ ರಚನಾ ಗ್ರಂಥಗಳೆಲ್ಲ ಶಕ್ತಿಯಿಂದ ಕೂಡಿಕೊಂಡಿವೆ. ಭಕ್ತಿಯಿಂದ ತೆಗೆದುಕೊಂಡು ಶರೀರ ಬಾಧೆಗಳಿರುವ ಕಡೆ ಇಟ್ಟರೆ ಅವು ಶರೀರಕ್ಕೆ ಅಂಟಿಕೊಂಡು ಹೋಗಿ, ಕೆಲವು ನಿಮಿಷಗಳು, ಕೆಲವು ಗಂಟೆಗಳು ಅಂಟಿಕೊಂಡಿದ್ದು, ಅಲ್ಲಿರುವ

ಕರ್ಮವೆಲ್ಲವನ್ನು ಸುಟ್ಟುಹಾಕಿ ಬಾಧೆಯನ್ನು ಇಲ್ಲದಂತೆ ಮಾಡುವವರೆಗು ಬಿಡುವುದಿಲ್ಲ. ಕಬ್ಬಿಣಕ್ಕೆ ಅಯಸ್ಕಾಂತ ಅಂಟಿಕೊಳ್ಳುವಂತೆ ಗ್ರಂಥಗಳು ಅಂಟಿಕೊಳ್ಳುತ್ತಿವೆಯೆಂದರೆ ಅವು ಹಿಂದೂ ಗ್ರಂಥಗಳಾಗಿರುವುದಕ್ಕೆ, ಹಿಂದೂ ಗುರುವು ಬರೆದಿರುವುದಕ್ಕೆ ವಿಶ್ವ ಹಿಂದೂಗಳು ಎಂದು ಹೆಸರು ಇಟ್ಟುಕೊಂಡವರು ಸಂತೋಷಿಸಬೇಕು. ದೊಡ್ಡದಾಗಿ ಹೇಳಿಕೊಳ್ಳಬೇಕು. ಅಂತಹ ಗ್ರಂಥಗಳನ್ನು ನೀಚವಾಗಿ ಕೆಳಗೆ ತಳ್ಳಿಹಾಕಿದರೆ ಎಷ್ಟೋ ಕರ್ಮವನ್ನು ತೆಗೆದುಹಾಕುವ ಗ್ರಂಥಗಳು ಅವರಿಗೆ ಎಷ್ಟೋ ಕರ್ಮವನ್ನು ಅಂಟಿಸಿವೆಯೆಂದು ನಾವು ಏಕೆ ಅಂದು ಕೊಳ್ಳಬಾರದು. ಅವರು ಗ್ರಂಥಗಳ ಬಗ್ಗೆ ಅಸಭ್ಯವಾಗಿ ಪ್ರವರ್ತಿ ಸಿರುವುದರಿಂದ ಅವರಿಗೆ ತಪ್ಪದೆ ಭಯಂಕರವಾದ ಕರ್ಮ ಸೇರಿರುತ್ತದೆ. ಮನುಷ್ಯ ಅನವಶ್ಯಕವಾಗಿ ಅಜ್ಞಾನದಿಂದ ದೇವರ ಜ್ಞಾನದ ಬಗ್ಗೆ ಚಿಕ್ಕ ಕೆಲಸವನ್ನು ಮಾಡಿ ದೊಡ್ಡ ಮೊತ್ತದ ಕರ್ಮವನ್ನು ಮೂಟೆಕಟ್ಟಿಕೊಳ್ಳುತ್ತಿದ್ದಾನೆ. ಅವರು ಮಾಡಿದ ನಿಮಿಷದ ಕೆಲಸಕ್ಕೆ ಹತ್ತು ವರ್ಷಗಳು ಬಾಧೆಪಡುವ ಕರ್ಮಬಂದಿರುತ್ತದೆ.

ಮತ ರಕ್ಷಕರೆಂದು ಹಿಂದೂ ಧರ್ಮಗಳನ್ನು ಅಡ್ಡ ಇಟ್ಟುಕೊಂಡು, ಸ್ವಲ್ಪವಾದರೂ ಹಿಂದೂ ಧರ್ಮಗಳನ್ನು ತಿಳಿಯದವರು ನಾವು ಹಿಂದೂ ಪರಿಷತ್ತಿನವರೆಂದು ಹೇಳಿಕೊಳ್ಳುತ್ತಾ, ತಮ್ಮ ಮತವನ್ನೇ ಗುರುತಿಸಲಾರದ ಸ್ಥಿತಿಯಲ್ಲಿ ಭಗವದ್ಗೀತೆಯನ್ನು ಬೀದಿಯೊಳಗೆ ಬೀಸಾಡಿದ್ದಾರೆಂದರೆ, ಇಂತಹ ದುರಾಚಾರಗಳನ್ನು ಮಾಡುವವರನ್ನು ಹಿಂದೂಗಳೇ ಛೀಮಾರಿ ಹಾಕುತ್ತಿದ್ದಾರೆಂದು ಅವರಿಗೆ ತಿಳಿಯದಿರಬಹುದು. ಹಿಂದೂ ಧರ್ಮಗಳನ್ನು ತಿಳಿದ ಹಿಂದೂಗಳು ಅಂಥವರನ್ನು ಕ್ಷಮಿಸುವುದಿಲ್ಲ. ಹಿಂದೂ ಪರಿಷತ್ತೆಂದು ಹಿಂದೂಗಳನ್ನೇ ಅವಮಾನಿಸಿದರೆ, ಹಿಂದೂ ಧರ್ಮಗಳಿಂದ ಕೂಡಿಕೊಂಡ ಭಗವದ್ಗೀತೆಯನ್ನು ಕ್ರೈಸ್ತ ಗ್ರಂಥವೆಂದರೆ ದೇವರು ಅವರನ್ನು ಕ್ಷಮಿಸುವುದಿಲ್ಲ. ನಮ್ಮ ರಚನೆಗಳಲ್ಲಿ **"ಹಿಂದೂತ್ವವನ್ನು ಕಾಪಾಡೋಣ"** ಎನ್ನುವ ಗ್ರಂಥವನ್ನು ನೋಡಿ ಕೂಡಾ ತ್ರೈತ ಸಿದ್ಧಾಂತ ಎನ್ನುವ ಒಂದುಮಾತನ್ನು, ಅದು ಸಿದ್ಧಾಂತವೆಂದು ಅರ್ಥ ಮಾಡಿಕೊಳ್ಳದೆ ಹಿಂದೂ ಗ್ರಂಥಗಳನ್ನು, ಹಿಂದೂಗಳನ್ನು ಅವಮಾನಿಸುವುದು

ಒಂದುಕಡೆ ಹಿಂದೂ ಸಮಾಜ ಗಮನಿಸುತ್ತಾ ಇದೆಯೆಂದು ಅವರು ಮರೆಯಬಾರದು. ಈದಿನ ಪುಟ್ಟಪರ್ತಿ ನಂತರ ಅತೀ ದೊಡ್ಡ ಹಿಂದೂ ಸಂಸ್ಥೆ **ಇಂದೂ ಜ್ಞಾನವೇದಿಕೆ,** ಇದಕ್ಕೆ ಅನುಬಂಧ ಸಂಸ್ಥೆ **ಪ್ರಬೋಧ ಸೇವಾಸಮಿತಿ.** ಎರಡು ಸಂಯುಕ್ತ ಸಂಸ್ಥೆಗಳು ಸೇರಿ ಅನಂತಪುರ ಜಿಲ್ಲೆ ತಾಡಿಪತ್ರಿ ಸಮೀಪದಲ್ಲಿ ಕೃಷ್ಣಮಂದಿರವನ್ನು ನಿರ್ಮಿಸಿ ಇಲ್ಲಿಗೆ 38 ವರ್ಷಗಳಿಂದ ಅದ್ವೈತ, ದ್ವೈತ ಸಿದ್ಧಾಂತಗಳಂತೆ ತ್ರೈತ ಸಿದ್ಧಾಂತವನ್ನು ಸ್ಥಾಪಿಸಿ ಮುಖ್ಯವಾಗಿ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯನ್ನು 2000 ದ ಇಸ್ವಿಯಿಂದ ಅಂದರೆ 16 ವರ್ಷಗಳಿಂದ ಪ್ರಚಾರ ಮಾಡುತ್ತಿದ್ದೇವೆ. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಎಷ್ಟೋ ಸಾವಿರಜನ ಓದಿದ್ದಾರೆ. ಎಷ್ಟೋ ಸಾವಿರಾರು ಜನರಿಗೆ ಕಾಣಿಸದ ಕ್ರೈಸ್ತವವು ಹಿಂದೂಪರಿಷತ್ ಅವರಿಗೆ ಕಾಣಿಸಿದೆ ಎಂದರೆ ಅದು ಏನೋ ಪ್ರಜೆಗಳಿಗೇ ಅರ್ಥವಾಗುತ್ತದೆ. ಮತ ರಕ್ಷಕರೆನ್ನುವವರಿಂದಲೇ ಹಿಂದೂಮತ ನಾಶವಾಗುತ್ತಿದೆಯೆಂದು ಈ ಸಂಘಟನೆಯೇ ಹೇಳುತ್ತಿದೆ.

ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿದ ನಂತರ ರಷ್ಯಾದಲ್ಲಿ ಭಗವದ್ಗೀತೆಯನ್ನು ನಿಷೇಧಿಸದಂತೆ ಬಿಟ್ಟಿದ್ದಾರೆನ್ನುವ ವಾರ್ತೆಯನ್ನು ನಾವು ಕೇಳಿದ್ದೇವೆ. ಇದನ್ನು ಅನುಸರಿಸಿ ನೋಡಿದರೆ ಇತರ ದೇಶದವರು ಕೂಡಾ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿನ ಜ್ಞಾನ ಶ್ರೇಷ್ಠವಾದುದೆಂದು ತಿಳಿದು ಕೊಂಡಿರುವಾಗ, ಇಂದಿನ ಹಿಂದೂಪರಿಷತ್‌ರವರಿಗೆ ಆ ವಿಷಯ ಏಕೆ ತಿಳಿಯಲಿಲ್ಲವೊ! ಯಾರಿಗಾದರೂ ನಮ್ಮಮೇಲೆ ಅನುಮಾನವಿದ್ದರೆ, ನಾವು ಹೇಳಿರುವುದು ಮತ ಪ್ರಚಾರವೆಂದು ತಿಳಿದಿದ್ದರೆ, ನಮ್ಮ ಆಶ್ರಮಕ್ಕೆ ಬಂದು ಇಲ್ಲಿ ಏನು ನಡೆಯುತ್ತಿದೆಯೋ ನೋಡಬಹುದು ಅಲ್ಲವೆ! ಪೋತಲೂರಿ ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ **"ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದೆಂದು"** ಬರೆಯುವುದಲ್ಲದೆ 400 ವರ್ಷಗಳ ಕೆಳಗೇ 'ಪ್ರಬೋಧಾಶ್ರಮ'ವನ್ನು ಕುರಿತು ಬರೆದ ವಾಕ್ಯಗಳು ಕಾಲಜ್ಞಾನದಲ್ಲಿ ಸುಮಾರು 60 ವಾಕ್ಯಗಳು ಇವೆ. ವೀರಬ್ರಹ್ಮನವರೇ ಹೊಗಳಿದ ಪ್ರಬೋಧಾಶ್ರಮ ಹಿಂದೂ

ಪರಿಷತ್‌ರವರಿಗೆ ಕ್ರೈಸ್ತವ ಸಂಸ್ಥೆಯಂತೆ ಕಾಣಿಸಿದೆಯೆಂದರೆ ಅವರಿಗಿರುವುದು ದೃಷ್ಠಿಯೋ ಅಲ್ಲವೊ ಅವರೇ ಅರ್ಥ ಮಾಡಿಕೊಳ್ಳಬೇಕು. ಏನಾದರೂ ಅನುಮಾನಗಳಿದ್ದರೆ ಎದುರುಗಡೆ ಬಂದು ಪ್ರಶ್ನಿಸಿ ಉತ್ತರವನ್ನು ತಿಳಿಯಬಹುದು ಅಲ್ಲವೆ! ನಮ್ಮ ಅಡ್ರಸ್ ಇದೆ. ನಮ್ಮ ವೆಬ್‌ಸೈಟ್ ಇದೆ. ಸೈಟ್ ಓಪನ್ ಮಾಡಿ ನೋಡಬಹುದು ಅಲ್ಲವೆ! ಕನಿಷ್ಟ ಜ್ಞಾನ ಕೂಡಾ ಇಲ್ಲದ ಮನುಷ್ಯರನ್ನು ಹಿಂದೂ ಪರಿಷತ್ ಸದಸ್ಯರಾಗಿ ಹೊರಗೆ ಕಳಿಸಿದರೆ ಹಿಂದೂ ಸಂಸ್ಥೆಗೇ ಹಿಂದೂ ಧರ್ಮಗಳು ತಿಳಿದ ಪ್ರಜೆಗಳಿಂದ ಮರ್ಯಾದೆ ಹೋಗುತ್ತದೆ.

ಹಿಂದೂ ಪರಿಷತ್‌ಯೆಂದು, ಮತ್ತೊಂದೆಂದು ಬೇರೆಬೇರೆ ಹೆಸರುಗಳು ಮತ ರಕ್ಷಕರೆಂದು ಇಟ್ಟುಕೊಂಡವರು, ಮಾಡುವ ದುರಾಚಾರಗಳನ್ನು ನೋಡಿ ಇತರ ಮತದವರು ಕೂಡಾ ಅದೇ ಕೆಲಸವನ್ನು ಮಾಡುತ್ತಾ, ಹಿಂದೂಗಳು ಚಿಕ್ಕ ದಾಳಿಗಳು ಮಾಡಿದರೆ ಅವರು ದೊಡ್ಡ ಬಾಂಬು ದಾಳಿಗಳು ಮಾಡುತ್ತಿದ್ದಾರೆ. ನಾವು ರೊಚ್ಚಿಗೆಬ್ಬಿಸುವುದರಿಂದ ಇತರರು ರೊಚ್ಚಿಗೇಳುತ್ತಾರೆಂದು ಮಧ್ಯದಲ್ಲಿ ಅಮಾಯಕ ಪ್ರಜೆಗಳು ಬಲಿಯಾಗಿ ಹೋಗುತ್ತಿದ್ದಾರೆಂದು, ಹಿಂದೂಗಳು ಅನೇಕಜನ ಅನ್ನುತ್ತಿರುವುದು ಹಿಂದೂ ಮತ ರಕ್ಷಕರಿಗೆ ಕೇಳಿಸಲಿಲ್ಲವೇನೊ! ಅಷ್ಟೇತಕ್ಕೆ ದೇವರ ಜ್ಞಾನ ಎಂದರೆ ಇತರ ಮತದವರು ಹಿಂದೂಜ್ಞಾನಕ್ಕೆ ಕೂಡಾ  ಬೆಲೆ ಕೊಡುತ್ತಿದ್ದಾರೆ. ಅದೇ ಹಿಂದೂ ಮತ ಹಿರಿಯರಿಗೆ ದೇವರ ಜ್ಞಾನವೆಂದರೆ ಏಕೆ ಇಷ್ಟವಿಲ್ಲ. ಈದಿನ ಹಿಂದೂಪರಿಷತ್ ಇನ್ನೊಂದು, ಇನ್ನೊಂದು ಎಂದು ಹೆಸರುಗಳು ಇಟ್ಟುಕೊಂಡವರೆಲ್ಲ ರಾಜಕೀಯ ಬಣ್ಣ ಬಳಿದುಕೊಂಡವರೆ ಹೊರತು ಹಿಂದೂ ಜ್ಞಾನವನ್ನಾಗಲಿ, ಇಂದೂ ಧರ್ಮಗಳನ್ನಾಗಲಿ ಸ್ವಲ್ಪವಾದರೂ ತಿಳಿಯದವರೇಯೆಂದು ಹೇಳಬಹುದು. ರಾಜಕೀಯುದಿಂದ ಮತ ಅಭಿವೃದ್ಧಿ ಆಗುವುದಿಲ್ಲ. ಹಿಂದೂ ಜ್ಞಾನ ತಿಳಿಯುವುದರಿಂದ ಹಿಂದೂಮತ ಅಭಿವೃದ್ಧಿ ಆಗಬಲ್ಲದು. ಯಾವಾಗ ಜ್ಞಾನ ತಿಳಿಯುವುದಿಲ್ಲವೊ ಆಗ ಯಾವ ಮತವಾದರೂ ಕ್ಷೀಣಿಸಿ ಹೋಗುತ್ತದೆ.

ಅವರ ಮತಕ್ಕಾಗಿ ಮುಸ್ಲಿಮರು ಏನಾದರೂ ಮಾಡುತ್ತಾರೆ. ಪರಮತವನ್ನು ಯಾವುದೇ ಕಾರಣಕ್ಕೆ ಒಪ್ಪಿಕೊಳ್ಳುವುದಿಲ್ಲ. ಅಂತಹ ಮುಸ್ಲಿಮ್‌ರು

ದೇವರ ಜ್ಞಾನದ ಮುಂದೆ ಮೇಣದಂತೆ ಕರಿಗಿಹೋಗುತ್ತಿದ್ದಾರೆ. ಹಿಂದೂಗಳದ್ದು 13ನೇ ತಾರೀಖು ನಡೆದ ಸಂಘಟನೆಯಾಗಿದರೆ, ಅದಕ್ಕಿಂತ ಐದು ದಿನಗಳ ಮುಂಚೆ ನಮ್ಮ ಭಕ್ತರು ಮುಸ್ಲಿಮರೊಂದಿಗೆ ಬೇಟಿಯಾದಾಗ ನಡೆದ ವಿಷಯವನ್ನು ನೋಡಿರಿ. ಈ ಸಂಘಟನೆಯನ್ನು ನೋಡಿದ ನಂತರ ನಮಗಿಂತ ಅವರೇ ಮೇಲೆಂದು ತಿಳಿಯಬಲ್ಲದು. 08–08–2016ನೇ ತಾರೀಖು ಹೈದರಾಬಾದ್‌ನಲ್ಲಿ ಚಾರ್ಮಿನಾರ್ ಹತ್ತಿರವಿರುವ ಮದೀನಾ ಮಾರ್ಕೆಟ್ಟಿನಲ್ಲಿ ನಮ್ಮವರು ಬಟ್ಟೆಗಳ ಷಾಪ್‌ನೊಳಗೆ ಹೋಗಿದ್ದಾರೆ. ದೊಡ್ಡ ಮೊತ್ತದಲ್ಲಿ ಷಾಪ್‌ಗೆ ಬಟ್ಟೆಗಳು ತರುವುದಕ್ಕಾಗಿ ಹೋಲ್‌ಸೇಲ್ ಷಾಪ್‌ಗೆ ಹೋಗುವುದು ನಡೆದಿದೆ. ಅದು ಮುಸ್ಲಿಮ್‌ರಿಗೆ ಸಂಬಂಧಿಸಿದ ಷಾಪ್. ಅಲ್ಲಿ ಸುಮಾರು ಒಂದು ವಿಧದ ಬಟ್ಟೆಗಳನ್ನು 30 ಸಾವಿರದವರೆಗು ತೆಗೆದುಕೊಳ್ಳುವುದು ನಡೆದಿದೆ. ಸುಮಾರು ಐದು ವರ್ಷಗಳಿಂದ ಆ ಷಾಪ್‌ಗೆ ಹೋಗುತ್ತಿರುವುದರಿಂದ ಷಾಪ್ ಯಜಮಾನ ಚೆನ್ನಾಗಿ ಪರಿಚಯುವಾಗಿದ್ದಾನೆ. ಕೆಲಸ ಮುಗಿದ ನಂತರ ಷಾಪ್ ಯಜಮಾನನೊಂದಿಗೆ ದೇವರು, ದೇವರ ಜ್ಞಾನವನ್ನು ಕುರಿತು ಮಾತನಾಡುವುದು ನಡೆದಿದೆ. ಐದು ಹೊತ್ತು ನಮಾಜ್ ಏಕೆ ಮಾಡುತ್ತಾರೆ? ಐದು ಹೊತ್ತು ಮಾಡುವುದಕ್ಕೆ ಏನಾದರೂ ಅರ್ಥವಿದೆಯಾ ಎಂದು ನಮ್ಮ ಭಕ್ತರು ಕೇಳುವುದು ನಡೆದಿದೆ. ಆಗ ಅವರು ಅದರ ವಿಷಯ ನಮಗೆ ಸ್ವಲ್ಪವೂ ತಿಳಿದಿಲ್ಲ ನಮ್ಮ ಹಿರಿಯರು ಹೇಳಿದಂತೆ ಮಾಡುತ್ತಿದ್ದೇವೆ. ನಮ್ಮ ಮತಹಿರಿಯರು ಕೇಳಿದರೆ "ಮೇರಾಜ್" ಎಂದು ಒಂದು ಕಥೆ ಹೇಳಿದ್ದಾರೆ. ಅಲ್ಲಾಹ್ ಪ್ರವಕ್ತರಿಗೆ ಐದು ನಮಾಜುಗಳು ಮಾಡೆಂದು ಹೇಳಿದ್ದಾನಂತೆ ಎಂದು ಹೇಳಿದ್ದಾರೆ. ಆಗ ನಮ್ಮ ಭಕ್ತರು ಕೃತಯುಗದಲ್ಲಿಯೇ ಐದು ಹೊತ್ತು ಪ್ರಾರ್ಥನೆ ಹಿಂದೂಗಳಲ್ಲಿ ಇತ್ತೆಂದು, ಅದೇ ಮುಸ್ಲಿಮ್‌ರೊಳಗೆ ಬಂದಿದೆಯೆಂದು ಹೇಳಿದಾಗ ಶ್ರದ್ಧೆಯಿಂದ ಕೇಳಿದ್ದಾರೆ. ನಂತರ ಉಪದೇಶದ ಮುಖಾಂತರ ಉಪವಾಸ ಬಂದಿದೆಯೆಂದು, ಉಪವಾಸ ವೆಂದರೆ ಆಹಾರ ತಿನ್ನದೆ ಇರುವುದಲ್ಲವೆಂದು ಹೇಳಿದಾಗ ಶ್ರದ್ಧೆಯಿಂದ ಕೇಳಿದ್ದಾರೆ. ನಂತರ ನಮಾಜ್ ಎನ್ನುವುದು ಪ್ರತ್ಯೇಕವಾದ ಅರ್ಥದಿಂದ ಕೂಡಿಕೊಂಡಿದೆ ಯೆಂದು, ನಮಾಜ್, ರೋಜಾ, ಜಕಾತ್, ಹಜ್ ಎನ್ನುವ ಪದಗಳಲ್ಲಿ "ಜ"

ಶಬ್ಧವಿದೆ. ಅಷ್ಟೇ ಅಲ್ಲದೆ ರಣಜಾನ್‌ನಲ್ಲಿ ಕೂಡಾ 'ಜ' ಶಬ್ಧವಿದೆ. 'ಜ' ಎಂದರೆ ತೆಲುಗಿನಲ್ಲಿ ಪ್ರತ್ಯೇಕವಾದ ಅರ್ಥವಿದೆ. ಮೇಲೆ ಹೇಳಿದ ಪದಗಳೆಲ್ಲ ಮುಸ್ಲಿಮ್ ಮತ ಹುಟ್ಟದಮುನ್ನವೇ ಕೃತಯುಗದಲ್ಲಿಯೇ ಇದ್ದವೆಂದು, ಆ ಪದಗಳೆಲ್ಲ ತೆಲುಗು ಪದಗಳೇಯೆಂದು ಹೇಳಿದಾಗ ಅವರು ಎಷ್ಟೋ ಭಯಭಕ್ತಿಗಳಿಂದ ಕೇಳುವುದಲ್ಲದೆ ನಮ್ಮವರು ಮಾಡಿದ 30 ಸಾವಿರ ಬಿಲ್‌ನಲ್ಲಿ 15 ನೂರು ರೂಪಾಯಿಗಳನ್ನು ಪುನಃ ಹಿಂದಕ್ಕೆ ಕೊಟ್ಟಿದ್ದಾರೆ. ದೇವರ ಜ್ಞಾನ ಹೇಳಿದಾಗ ಅವರಲ್ಲಿ ಎಷ್ಟೋ ಬದಲಾವಣೆ, ವಿಧೇಯತೆ ಕಾಣಿಸಿದೆ.

ಹೇಳುವವರು ಹಿಂದೂಗಳು ಅಲ್ಲವೆ! ಎಂದು ಅವರ ಮಾತುಗಳನ್ನು ಏಕೆ ಕೇಳಬೇಕು? ಎಂದು ಅವರು ಅಂದುಕೊಳ್ಳಲಿಲ್ಲ. ನಮ್ಮವರು ಖುರಾನ್ ಗ್ರಂಥದಲ್ಲಿ ಇಂತಹ ಸೂರಾದಲ್ಲಿ ಇಂತಹ ಆಯತ್‌ನಲ್ಲಿ ನಮ್ಮ ತ್ರೈತ ಸಿದ್ಧಾಂತ ಇದೆ ನೋಡಿರೆಂದು ಖುರಾನ್‌ನಲ್ಲಿನ ವಾಕ್ಯವನ್ನು ಹೇಳಿದರೆ ಅವರು ಶ್ರದ್ಧೆಯಿಂದ ಕೇಳುವುದು ನಡೆದಿದೆ. ಅದೇ ವಾಕ್ಯವೇ ಭಗವದ್ಗೀತೆಯಲ್ಲಿ ಇಂತಹ ಶ್ಲೋಕದಲ್ಲಿ ಇದೆ ನೋಡಿರೆಂದು ಹೇಳಿದರೆ ಅವರು ಆಶ್ಚರ್ಯವಾಗಿ ಕೇಳಿ, ನೀವು ನಾವು ಒಂದೇ ದಾರಿಯಲ್ಲಿ ಇದ್ದೇವೆಂದು ಸಂತೋಷಿಸಿದ್ದಾರೆ. ಖುರಾನ್ ವಾಕ್ಯ ಹೇಳಿದರೆ ಮುಸ್ಲಿಮ್‌ರು ಎಷ್ಟೋ ಸಂತೋಷಿಸುತ್ತಿರುವಾಗ, ಹಿಂದೂಗಳಿಗೆ ಭಗವದ್ಗೀತೆಗೆ ವಿವರವನ್ನು ಬರೆದಿದ್ದೇವೆಂದು ಹೇಳಿದರೂ ಅಸೂಯೆ ಪಡುತ್ತಿದ್ದಾರೆ. ಬೀಚ್‌ಪಲ್ಲಿ ಹತ್ತಿರ ಹಿಂದೂ ಪರಿಷತ್‌ರವರಿಗೆ ಭಗವದ್ಗೀತೆ ತೋರಿಸಿದರೆ ಶಂಕರಾಚಾರ್ಯರು ಬರೆದಿದ್ದಾರೆ ಅಲ್ಲವೆ! ನೀವೆಲ್ಲಾ ಏಕೆ ಬರೆಯಬೇಕೆಂದು ಅನ್ನುವುದು ನಡೆದಿದೆ. ಅದೇ ಭಗವದ್ಗೀತೆ ವಾಕ್ಯವೇ ಖುರಾನ್‌ನಲ್ಲಿ 50ನೇ ಸೂರಾ 21ನೇ ಆಯತ್‌ನಲ್ಲಿ **ತ್ರೈತ ಸಿದ್ಧಾಂತ (ಮೂರು ಆತ್ಮಗಳ ವಿವರ)** ಇದೆಯೆಂದು ತೋರಿಸಿದಾಗ ಮುಸ್ಲಿಮ್‌ರು ಸಂತೋಷಿಸಿದ್ದಾರೆ. ನಮ್ಮವರು ಮುಖದ ಮೇಲೆ ಚಕ್ರಗಳ ಗುರುತುಗಳು ಇಟ್ಟುಕೊಂಡು ಮಾತನಾಡಿದರೂ ನೀವು ಹಿಂದೂಗಳಲ್ಲವೇ! ಎಂದು ಮುಸ್ಲಿಮ್‌ರು ಅಂದುಕೊಳ್ಳದೆ ದೇವರ ಜ್ಞಾನವನ್ನು ಖುರಾನ್ ವಾಕ್ಯರೂಪದಲ್ಲಿ ಕೇಳುತ್ತಲೇ

ಸಂತೋಷ ಉಕ್ಕಿ ಸಹಾನುಭೂತಿಯಾಗಿ ಬಿಲ್‌ನಲ್ಲಿ 30 ಸಾವಿರಕ್ಕೆ 1500 ರೂ॥ಗಳು ಕೇಳದಿದ್ದರೂ ಪುನಃ ಹಿಂದಕ್ಕೆ ಕೊಟ್ಟಿದ್ದಾರೆ. (ಆ ಷಾಪ್ ಅಡ್ರಸ್ ಪುಟದಲ್ಲಿ ಕೊಡುತ್ತಿದ್ದೇವೆ ನೋಡಿರಿ.)

ನಮ್ಮವರು ಜ್ಞಾನ ಹೇಳುತ್ತಾ ಇದ್ದರೆ ಅವರು ವ್ಯಾಪಾರವನ್ನು ಬಿಟ್ಟು ಶ್ರದ್ಧೆಯಿಂದ ಕೇಳುವುದು ನಮಗೂ ಕೂಡಾ ಆಶ್ಚರ್ಯವಾಗಿ ಕಾಣಿಸಿದೆ. ಅಂತಹ ಸ್ಪಂದನೆ ಹಿಂದೂ ಪರಿಷತ್‌ರವರಲ್ಲಿ ಇಲ್ಲದಿರುವುದು, ನಾವೇ ತಿಳಿದವರೆನ್ನುವಂತೆ ಗುರುಗಳನ್ನು ಕೂಡಾ ಅವಹೇಳನವಾಗಿ ಮಾತನಾಡುವುದು ನೋಡಿದರೆ "ಇವರು ಹಿಂದೂಗಳೇನಾ!?" ಎಂದು ಅನುಮಾನ ಬಾರದೆತಪ್ಪುವುದಿಲ್ಲ. ಮುಖದ ಮೇಲೆ ಕರ್ಮ, ಕಾಲ, ಗುಣಚಕ್ರಗಳನ್ನು ಧರಿಸಿ ಕಾಣಿಸುತ್ತಿದ್ದರೂ ಇತರ ಮತಸ್ಥರು ಹಣೆಯ ಮೇಲೆ ಏನು ಧರಿಸುವುದಿಲ್ಲ ಅಲ್ಲವೆ! ಹಿಂದೂಗಳೇ ಅಲ್ಲವೆ! ಧರಿಸುವುದೆಂದು ಅಂದುಕೊಳ್ಳದೆ ಹಿಂದೂಗಳೆನ್ನುವವರೇ ಹಿಂದೂಗಳನ್ನು ಅವಹೇಳನವಾಗಿ ಮಾತನಾಡುತ್ತಿದ್ದರೆ ಇದು ಹಿಂದೂ ಸಾಂಪ್ರದಾಯವಾ? ಎಂದು ಪ್ರಶ್ನೆ ಬರುತ್ತದೆ. ಯಾವುದು ಏನಾದರೂ ಇಂಥಹ ಜ್ಞಾನವಿಲ್ಲದ, ಕೆಟ್ಟುಹೋದ ಸಮಾಜದಂತಿರುವ ಅವರ ಮಧ್ಯದಲ್ಲಿ ಏಕೆ ಹುಟ್ಟಿದ್ದೇವೆ? ಎಂದು ಅಂದುಕೊಳ್ಳಬೇಕಾಗಿ ಬರುತ್ತಿದೆ. ಈದಿನ ನಮ್ಮ ಜ್ಞಾನವಾದ ತ್ರೈತ ಸಿದ್ಧಾಂತ ಜ್ಞಾನ, ಭಗವದ್ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿರುವ ಜ್ಞಾನವನ್ನು, ಖುರಾನ್ ಗ್ರಂಥದಲ್ಲಿ 50ನೇ ಸೂರಾದಲ್ಲಿ


Zam Zam Traders
WHOLESALE READYMADE GARMENTS
# 11 & 12, Ground Floor, City Plaza, Dewan Devdi,
Hyderabad. (T.S.) Ph: 040-65351030
Cell: 9866801451, 9848923200, 9849150990
No. 014 Date 8/8/16

21ನೇ ಆಯತ್‌ನಲ್ಲಿ ಮೂರು ಆತ್ಮಗಳನ್ನು ಕುರಿತು **"ನಡೆಯಲ್ಪಡುವವನು, ನಡೆಸುವವನು, ಸಾಕ್ಷಿಯಾಗಿ ನೋಡುವವನು"** ಎಂದು ಹೇಳಿದ್ದಾರೆಂದು ಹೇಳಿದಾಗ ಮತವನ್ನು ಮರೆತುಹೋಗಿ ಮುಸ್ಲಿಮ್‌ರು ಸಂತೋಷಪಡುತ್ತಿದ್ದಾ ರೆಂದರೆ, ಒಂದು ವಿಧವಾಗಿ ಅವರು ಜ್ಞಾನದ ಹತ್ತಿರ ತಮ್ಮ ಮತವನ್ನು ಅಡಗಿಸಿ ಎಲ್ಲರೂ ಸಮಾನವೇಯೆಂಬ ಭಾವನೆಯೊಳಗೆ ಬಂದಿದ್ದಾರೆಂದರೆ, ಮತ ಎನ್ನುವುದರಲ್ಲಿ ಹೆಚ್ಚಾಗಿ ಯಾರು ಸಿಲುಕಿಕೊಂಡಿದ್ದಾರೊ ನಡೆದ ಸಂಘಟನೆಯನ್ನು ನೋಡಿದರೆ ನಿಮಗೇ ಅರ್ಥವಾಗಿರುತ್ತದೆ. ಮತಛಾಂದಸ್ಸರನ್ನು ದೇವರು ಇಲ್ಲದಂತೆ ಮಾಡುವ ಕಾಲ ಹತ್ತಿರದಲ್ಲಿಯೇ ಇದೆಯೆಂದು ಆಶಿಸುತ್ತಿದ್ದೇವೆ.

ದೇವರ ದೃಷ್ಠಿಯಲ್ಲಿ ಮನುಷ್ಯರೆಲ್ಲ ಸಮಾನವೇ. ಮನುಷ್ಯರ ದೃಷ್ಠಿಯಲ್ಲಿಯೇ ದೇವರು ಅನೇಕ ವಿಧಗಳಾಗಿ ಕಾಣಿಸುತ್ತಿರಬಹುದು. ಮತ ಎನ್ನುವ ಮಾಯೆ ಆ ವಿಧವಾಗಿ ದೇವರು ಕೂಡಾ ಮತಕ್ಕೆ ಒಬ್ಬನಿದ್ದಾನೆಂದು ಹೇಳುತ್ತಿದ್ದರೂ, ಅದಕ್ಕೆ ವಿರುದ್ಧವಾಗಿ ಎಲ್ಲ ಮತಗಳಿಗು ದೇವರು ಒಬ್ಬನೇ, ದೇವರ ಜ್ಞಾನ ಒಂದೇಯೆಂದು ನಾವು ಹೇಳುತ್ತಿರುತ್ತೇವೆ. ನಾನು ಹುಟ್ಟಿರುವುದು ಹಿಂದೂಮತದಲ್ಲಿ ನಾನು ಓದಿರುವುದು ಭಗವದ್ಗೀತೆ. ಭಗವದ್ಗೀತೆಯನ್ನು ಓದಿದ ನಂತರ ಅದರಲ್ಲಿ ಬರೆದ ವಿವರಕ್ಕು ನನಗೆ ಅರ್ಥವಾದ ವಿವರಕ್ಕು ಎಷ್ಟೋ ವ್ಯತ್ಯಾಸ ಕಾಣಿಸಿದೆ. ಅಂದಿನಿಂದ ನನ್ನಲ್ಲಿ ಉತ್ಪನ್ನವಾದ ಜ್ಞಾನ ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಕಾಣಿಸಿದೆ. ಆಗ ಖುರಾನ್, ಬೈಬಲ್‌ನಲ್ಲಿ ನಾಲ್ಕು ಸುವಾರ್ತೆಗಳು ನನಗೆ ಚೆನ್ನಾಗಿ ಹತ್ತಿರವಾಗಿವೆ. ಭಗವದ್ಗೀತೆಯಲ್ಲಿಯೂ, ನಾಲ್ಕು ಸುವಾರ್ತೆಗಳಲ್ಲಿಯೂ, ಖುರಾನ್ ಗ್ರಂಥದಲ್ಲಿಯೂ ಒಂದೇ ಜ್ಞಾನ ಕಾಣಿಸಿದೆ. ಭಗವದ್ಗೀತೆ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇರುವಂತೆ ತಿಳಿದುಹೋಗಿದೆ. ಆದುದರಿಂದ ನಾನು ಯಾವ ಗ್ರಂಥದಲ್ಲಿನ ಜ್ಞಾನವನ್ನಾದರೂ ಹೇಳಬಲ್ಲೆನು. ಯಾವ ಮತದವರಿಗಾದರೂ ಜ್ಞಾನವನ್ನು ಹೇಳಬಲ್ಲೆನು. ಒಂದುದಿನ ಖುರಾನ್ ಗ್ರಂಥದಲ್ಲಿ ಐದನೆ ಸೂರಾದಲ್ಲಿ 44, 46, 48, 68 ಆಯತ್‌ಗಳನ್ನು ಹಾಗೆಯೇ 62ನೇ ಸೂರಾದಲ್ಲಿ 5ನೇ ಆಯತ್‌ನ್ನು ನೋಡಿದ್ದೇನೆ. (5-44,46, 48, 68)

(62–5) ವಾಕ್ಯಗಳನ್ನು ನೋಡಿದ ನಂತರ ತೌರಾತು ಗ್ರಂಥ ಆಧಾರವಾಗಿ, ತೌರಾತ್‌ನಲ್ಲಿನ ಜ್ಞಾನವನ್ನೇ ಉಳಿದ ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆಯೆಂದು ಬರೆಯುವುದು ನಡೆದಿದೆ. ಆದರೆ ತೌರಾತ್ ಗ್ರಂಥವೆಂದರೆ ಏನೋ ಮುಸ್ಲಿಮ್‌ರಿಗೆ ತಿಳಿದಿಲ್ಲ. ತೌರಾತ್ ಎಂದರೆ ಒಂದು ಮುಸ್ಲಿಮ್‌ರಿಗೇ ಅಲ್ಲ ಭೂಮಿಮೇಲೆ ಯಾರಿಗೂ ಆ ಗ್ರಂಥ ಗೊತ್ತಿಲ್ಲ. ತೌರಾತ್ ಗ್ರಂಥವನ್ನು ಯಾರೂ ನೋಡಲಿಲ್ಲ. ಒಬ್ಬ ಮೂಸಾ ಪ್ರವಕ್ತ (ಮೋಷೆ ಪ್ರವಕ್ತ) ಹೊರತು ಅದನ್ನು ಯಾರೂ ನೋಡಲಿಲ್ಲ. ವಾಸ್ತವಕ್ಕೆ ಅದು ಸ್ಥೂಲ ಗ್ರಂಥವೇ ಅಲ್ಲ. ತೌರಾತು ಗ್ರಂಥ ಒಂದು ರಹಸ್ಯವಾಗಿ ಇರುತ್ತಿತ್ತು. ಆದರೆ ಆ ರಹಸ್ಯ ನನಗೆ ಸುಲಭವಾಗಿ ತಿಳಿದುಹೋಗಿದೆ. ದ್ವಾಪರ ಯುಗದಲ್ಲಿ ತಯಾರಾದ ಭಗವದ್ಗೀತೆ ಯೊಂದರ ಮೊದಲ ಪ್ರತಿಯನ್ನೇ ದೇವರು ಮೂಸಾಗೆ (ಮೋಷೆಗೆ) ನೀಡುವುದು ನಡೆದಿದೆ. ತೌರಾತ್ ಗ್ರಂಥ ಭಗವದ್ಗೀತೆಯೆಂದು ಇಂದಿಗೂ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು.

ನಮ್ಮ ರಚನೆಯಲ್ಲಿನ **"ಕೃಷ್ಣಮೂಸ"** ಎನ್ನುವ ಗ್ರಂಥವನ್ನು ಓದಿದರೆ ನನಗೆ ತಿಳಿದ ರಹಸ್ಯ ನಿಮಗು ಕೂಡಾ ತಿಳಿಯಬಲ್ಲದು. ನನಗೆ ತಿಳಿದ ರಹಸ್ಯದ ಪ್ರಕಾರ ಭಗವದ್ಗೀತೆ ಜ್ಞಾನವೇ ಉಳಿದ ಎರಡು ಗ್ರಂಥಗಳಲ್ಲಿ ಇದೆಯೆಂದು ತಿಳಿದುಹೋಗಿದೆ. ಆದುದರಿಂದ ಉಳಿದ ಎರಡು ಗ್ರಂಥಗಳ ಜ್ಞಾನ ನನಗೆ ಸುಲಭವಾಗಿಹೋಗಿದೆ. ಎಷ್ಟೋ ವರ್ಷಗಳಿಂದ ಆ ಮತದಲ್ಲಿ ಇರುವವರಿಗೆ ತಿಳಿಯದ ಜ್ಞಾನ ರಹಸ್ಯಗಳನ್ನು ನಾನು ಸುಲಭವಾಗಿ ಹೇಳಬಲ್ಲೆನು. ಆ ವಿಧಾನದ ಪ್ರಕಾರ ನಾನು ಮೂರು ಮತದವರಿಗೆ ಜ್ಞಾನವನ್ನು ಹೇಳುವ ಗುರುವಾಗಿ ಎಲ್ಲರೂ ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೆ ಮೂರು ಮತಗಳ ಜ್ಞಾನವನ್ನು ಸಮನ್ವಯ ಮಾಡಿ ಹೇಳುವವರು ಭೂಮಿಮೇಲೆ ಯಾರೂ ಇಲ್ಲದಿರುವುದರಿಂದ ನನ್ನನ್ನು **"ತ್ರಿಮತ ಏಕೈಕ ಗುರುವು"** ಎಂದು ಎಲ್ಲರೂ ಹೇಳುವುದಾಗಿದೆ. ಆ ನಿಟ್ಟಿನಲ್ಲಿಯೇ ಮೂರು ಮತಗಳಲ್ಲಿ ಮತ ತತ್ತ್ವವನ್ನು ಇಲ್ಲದಂತೆ ಮಾಡಿ, ಮನುಷ್ಯರೆಲ್ಲರನ್ನು ಏಕೈಕ ಮತವಾಗಿ ತೀಡಿತಿದ್ದಬೇಕೆನ್ನುವ ಉದ್ದೇಶದಿಂದ,

ಈಗ ಮೂರು ಗ್ರಂಥಗಳಲ್ಲಿನ ಮೂರು ಪ್ರಥಮ ವಾಕ್ಯಗಳಿಗೆ ವಿವರವನ್ನು ಬರೆಯಲ್ಪಟ್ಟಿದ್ದೇವೆ. ಆ ವಿಧವಾಗಿ ಮೂರು ಗ್ರಂಥಗಳ ಮೂರು ಪ್ರಥಮ ವಾಕ್ಯಗಳಿಗೆ ವಿವರವನ್ನು ಬರೆಯಲ್ಪಟ್ಟಿದ್ದೇವೆ. ಆ ವಿಷಯ ಹೇಳುವಮುನ್ನ ಈದಿನ ಮನುಷ್ಯರಲ್ಲಿ ಯಾವ ಮತದಲ್ಲಿ ಎಷ್ಟು ಮತದ್ವೇಷವಿದೆಯೊ ಹೇಳಿದ್ದೇವೆ. ಮತ ದ್ವೇಷಗಳು ಎಲ್ಲಾ ಮತಗಳಲ್ಲಿ ಇದ್ದರೂ ಕೆಲವರು ಮನುಷ್ಯರು ದೈವಜ್ಞಾನವನ್ನು ಕೇಳಿದಾಗ ಮತವನ್ನು ಮರೆತು ಹೋಗುತ್ತಿದ್ದಾರೆ. ಹಾಗೆ ದ್ವೇಷಗಳನ್ನೆ ಮರೆತುಹೋಗುತ್ತಿದ್ದಾರೆ. ಕೆಲವರು ಮಾತ್ರ ಜ್ಞಾನವನ್ನು ಹೇಳಿದರೂ ಕೇಳದಂತೆ ತಮ್ಮಲ್ಲಿನ ಅಜ್ಞಾನದಿಂದ ದ್ವೇಷವಾಗಿಯೇ ಪ್ರವರ್ತಿಸುತ್ತಿದ್ದಾರೆ. ಹಿಂದೂಗಳಾದರೆ ತಮ್ಮ ಧರ್ಮಗಳನ್ನು ತಾವೇ ಗುರುತಿಸಲಾರದೆ ತಮ್ಮ ಮತದವರ ಮೇಲೆಯೇ ದಾಳಿಗೆ ಇಳಿಯುತ್ತಿದ್ದಾರೆ. ಉಳಿದ ಎರಡು ಮತಗಳನ್ನು ಸಂಸ್ಕರಿಸುವುದಕ್ಕೆ ಬೇಕಾದ ಕಾಲಕ್ಕಿಂತ ಹಿಂದೂಮತವನ್ನು ಸಂಸ್ಕರಿಸುವುದಕ್ಕೆ ಹೆಚ್ಚುಕಾಲ ಬೇಕಾಗುತ್ತದೆ ಎಂದು ಅಂದುಕೊಳ್ಳುತ್ತಿದ್ದೇನೆ.

ಈಗ ನೀವು ಮತ ಎನ್ನುವ ಮಾಯೆಯನ್ನು ಬಿಟ್ಟು, ದೈವಗ್ರಂಥದಲ್ಲಿ ಹೇಳಿದ ಜ್ಞಾನವನ್ನು ತಿಳಿಯುತ್ತಿದ್ದೇವೆನ್ನುವ ಜ್ಞಾಪಕದೊಳಗೆ ಬನ್ನಿ. ಇಲ್ಲಿ ಹೇಳಿರುವುದು ಯಾವ ಗ್ರಂಥದಲ್ಲಿನ ಜ್ಞಾನವಾದರೂ ಅದು ನಿನ್ನ ಗ್ರಂಥದಲ್ಲಿ ಕೂಡಾ ಇದೆಯೆಂದು ತಿಳಿಯಬೇಕು. ಪ್ರತಿ ಗ್ರಂಥದಲ್ಲಿನ ವಾಕ್ಯ ಉಳಿದ ಗ್ರಂಥಗಳಲ್ಲಿ ಕೂಡಾ ಇರುವುದು ವಾಸ್ತವ. ಆದರೆ ಅದನ್ನು ಅನ್ವೇಷಿಸಿದರೆ ಹೊರತು ಅದು ಎಲ್ಲಿರುವುದು ತಿಳಿಯುವುದಿಲ್ಲ. ಆದುದರಿಂದ ಬೆಳಗಿನಜಾವ ಮುಂಜಾನೆಯಲ್ಲಿ ಪೂರ್ವದಲ್ಲಿ ಬೆಳ್ಳಗಾಗುವವರೆಗು ಎಂದರೆ ಬೆಳಗಿನಜಾವ 4ರಿಂದ 6 ಗಂಟೆಗಳವರೆಗು **"ಅಲ್ಲಾಹ್ ನಿಮಗೋಸ್ಕರ ಬರೆದಿಟ್ಟಿರುವುದನ್ನು ಅನ್ವೇಷಿಸುವುದಕ್ಕೆ ನಿಮಗೆ ಅನುಮತಿ ಇದೆ. ಮುಂಜಾನೆ ಬಿಳಪು ಕಿರಣಗಳು ಪ್ರಸ್ಫುಟವಾಗುವವರೆಗು ತಿನ್ನಿರಿ, ಕುಡಿಯಿರಿ (ಓದಿರಿ, ಕೇಳಿರಿ)"** ಎಂದು ಇದೆ. ಈ ವಾಕ್ಯ ಖುರಾನ್ ಗ್ರಂಥದಲ್ಲಿ ಎರಡನೆ ಸುರಾದಲ್ಲಿ 187 ಆಯತ್‌ನಲ್ಲಿ ಇದೆ. ದೇವರು ನಿಮಗೆ ಕೊಟ್ಟಿರುವ ಗ್ರಂಥದಲ್ಲಿ ಬರೆದಿರುವುದನ್ನು ಅನ್ವೇಷಿಸುವುದಕ್ಕೆ ನಿಮಗೆ ಮುಂಜಾನೆ

ಕಾಲವನ್ನು ದೇವರು ನಿರ್ಣಯಿಸಿ ಹೇಳಿದ್ದಾನೆ. ಆಗ ನೀವು ದೇವರುಕೊಟ್ಟಿರುವ ಜ್ಞಾನವನ್ನು ಅನ್ವೇಷಿಸಬಹುದು. ಓದು ಬರದಿದ್ದರೆ ಕೇಳಬಹುದು ಎಂದು ಸೂಕ್ಷ್ಮ ಜ್ಞಾನವನ್ನು ಹೇಳಿದಾಗ ಮನುಷ್ಯರು ಅದನ್ನು ತಿನ್ನುವುದಕ್ಕೆ, ಕುಡಿಯುವುದಕ್ಕೆ ವಿನಿಯೋಗಿಸಿಕೊಳ್ಳುತ್ತಿದ್ದಾರೆ. ಖುರಾನ್ ಗ್ರಂಥದಲ್ಲಿ ಸೂರಾ 2, ಆಯತ್ 187 ವಾಕ್ಯವೊಂದರ ಸೂಕ್ಷ್ಮ ವಿವರ ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ಒರೆಗಲ್ಲು"** ಗ್ರಂಥವನ್ನು ಓದಿರಿ. ಈಗ ದ್ವಿತೀಯ ದೈವಗ್ರಂಥದಲ್ಲಿನ ಯೊಹಾನ್ ಸುವಾರ್ತೆಯಲ್ಲಿನ ಮೊದಲ ಮೂರು ವಾಕ್ಯಗಳಿಗು ವಿವರವನ್ನು ಹೇಳಿಕೊಳ್ಳೋಣ.

**ಆದಿಯಲ್ಲಿ ವಾಕ್ಯವಿತ್ತು**
**ವಾಕ್ಯ ದೇವರ ಹತ್ತಿರವಿತ್ತು**
**ವಾಕ್ಯವು ದೇವರಾಗಿತ್ತು.**

ಬೈಬಲ್ ಬೋಧನೆಯಲ್ಲಿ ಈ ಮೂರು ವಾಕ್ಯಗಳನ್ನು ಪ್ರಥಮ ವಾಕ್ಯಗಳಾಗಿ ಹೇಳಿಕೊಳ್ಳುತ್ತಿದ್ದೇವೆ. ಗ್ರಂಥ ಪ್ರಾರಂಭದಲ್ಲಿನ ಆದಿಕಾಂಡದಲ್ಲಿರುವ ವಾಕ್ಯಗಳನ್ನು ಗ್ರಂಥ ಪ್ರಥಮ ವಾಕ್ಯಗಳಾಗಿ ಹೇಳಬೇಕು ಅಲ್ಲವೆ! ಎಂದು ಇತರರು ಕೇಳಬಹುದು. ಅಂತಹ ಅನುಮಾನ ಬಾರದಂತೆ ಮೊದಲೇ ವಿವರವನ್ನು ಹೇಳಿದ್ದೇವೆ. ಮನುಷ್ಯನಿಗೆ ಅಗತ್ಯವಾದ ಬೋಧನೆಯನ್ನೇ ಗ್ರಂಥವಾಗಿ ತೆಗೆದುಕೊಂಡು, ಅದರಲ್ಲಿ ಮೊದಲ ವಾಕ್ಯಗಳನ್ನು ಹೇಳಿಕೊಳ್ಳುತ್ತಿದ್ದೇವೆ. ಆ ಪದ್ಧತಿ ಪ್ರಕಾರ ನಾಲ್ಕು ಸುವಾರ್ತೆಗಳು ಭಗವಂತನಾದ ಯೇಸು ಹೇಳಿರುವವು. ಅದರಲ್ಲಿ ಯೋಹಾನ್ ಸುವಾರ್ತೆ ಕೊನೆಯದಾದ ಉಳಿದ ಮೂರು ಅಧ್ಯಾಯಗಳಿಗಿಂತ ಬೋಧನೆಯಿಂದ ಪ್ರಾರಂಭವಾಗಿರುವುದು ಒಂದು ಯೋಹಾನ್ ಸುವಾರ್ತೆ ಮಾತ್ರವೇ. ಭಗವದ್ಗೀತೆಯಲ್ಲಿ ಕೂಡಾ ಇದೇ ಸೂತ್ರದ ಪ್ರಕಾರ ಎರಡನೆ ಅಧ್ಯಾಯವಾದ ಸಾಂಖ್ಯಯೋಗದಲ್ಲಿ 11ನೇ ಶ್ಲೋಕದಿಂದ ಪ್ರಥಮ ವಾಕ್ಯಗಳನ್ನು ತೆಗೆದುಕೊಂಡಿದ್ದೇವೆ. ಜ್ಞಾನಬೋಧ ಅಲ್ಲಿಂದಲೇ ಪ್ರಾರಂಭವಾಗುವುದರಿಂದ

ಸಾಂಖ್ಯ ಯೋಗದಲ್ಲಿ 11, 12, 13ನೇ ಶ್ಲೋಕಗಳನ್ನು ಮೊದಲ ಮಾತುಗಳಾಗಿ ಹೇಳಿಕೊಂಡಿದ್ದೇವೆ. ಹಾಗೇ ಈಗ ಇಂಜೀಲು ಗ್ರಂಥದಿಂದ ಗ್ರಂಥ ಮಧ್ಯದಲ್ಲಿರುವ ಎಂದರೆ 43ನೇ ಪಾಠದಿಂದ ಪ್ರಾರಂಭ ವಾಕ್ಯಗಳನ್ನು ತೆಗೆದುಕೊಳ್ಳುವುದು ನಡೆದಿದೆ. ಅಲ್ಲಿ ತೌರಾತ್‌ನಲ್ಲಿ ಮೂರು ಶ್ಲೋಕಗಳನ್ನು ಮೂರು ವಾಕ್ಯಗಳಾಗಿ ತೆಗೆದುಕೊಂಡಿದ್ದೇವೆ. ಆದರೆ ಇಲ್ಲಿ ಯೋಹಾನ್ ಸುವಾರ್ತೆಯಲ್ಲಿ ಮೂರು ವರಸೆ ಸಂಖ್ಯೆಯಲ್ಲಿರುವ ಮೂರು ವಾಕ್ಯಗಳನ್ನು ತೆಗೆದುಕೊಳ್ಳದೆ ಒಂದೇ ವಾಕ್ಯದಲ್ಲಿರುವ ಸಮಾಚಾರವನ್ನು ಮೂರು ಪ್ರಥಮ ವಾಕ್ಯಗಳಾಗಿ ತೆಗೆದುಕೊಂಡಿದ್ದೇವೆ. ವಾಕ್ಯಗಳ ವರಸೆ ಸಂಖ್ಯೆ ಮುಖ್ಯವಲ್ಲ. ಮೂರು ಭಾವನೆಗಳಿಂದ ತುಂಬಿರುವವುಗಳನ್ನು ಮೂರು ವಾಕ್ಯಗಳಾಗಿ ತೆಗೆದು ಕೊಂಡಿದ್ದೇವೆ. ಆದ್ದರಿಂದ ಮೂರು ಚಿಕ್ಕ ವಾಕ್ಯಗಳಿದ್ದರೂ, ಅವು ಮೂರು ದೊಡ್ಡ ಭಾವನೆಗಳಿರುವ ವಾಕ್ಯಗಳೆಂದು ತಿಳಿಯಬೇಕು.

ಈ ಮೂರು ವಾಕ್ಯಗಳು ಪ್ರತ್ಯೇಕವಾದ ಸೂಕ್ಷ್ಮ ಭಾವನೆಯಿಂದ ಕೂಡಿವೆ. ಭಗವದ್ಗೀತೆ ಮೊದಲ ಮೂರು ವಾಕ್ಯಗಳು ಜೀವಾತ್ಮ, ಆತ್ಮವನ್ನು ಕುರಿತು ಹೇಳಿರುವವಾಗಿ ಇವೆ. ಆದರೆ ಇಂಜೀಲು (ಬೈಬಲ್) ಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿನ ಮೊದಲ ವಾಕ್ಯಗಳು ಪ್ರತ್ಯೇಕವಾದ ಭಾವನೆಯನ್ನು ಬೋಧಿಸುತ್ತಿವೆ. ಭಗವದ್ಗೀತೆ ಪ್ರಾರಂಭದಲ್ಲಿ ಜೀವಾತ್ಮ, ಆತ್ಮ, ಶರೀರ ಎನ್ನುವ ಮೂರು ಭಾಗಗಳನ್ನು ಕುರಿತು ತಿಳಿಸುವುದಾಗಿದೆ. ಇಲ್ಲಿ ಯೋಹಾನ್ ಸುವಾರ್ತೆಯಲ್ಲಿನ ಮೂರು ಪ್ರಥಮ ವಾಕ್ಯಗಳಲ್ಲಿ ಜ್ಞಾನ, ಆತ್ಮ, ಪರಮಾತ್ಮಯೆನ್ನುವ ಮೂರು ಅಂಶಗಳನ್ನು ಕುರಿತು ಹೇಳುವುದಾಗಿದೆ. ಆದರೆ ಈ ಮೂರು ವಾಕ್ಯಗಳಲ್ಲಿ ಎಲ್ಲಿ ಆತ್ಮ ಇದೆಯೋ, ಎಲ್ಲಿ ಪರಮಾತ್ಮ ಇದೆಯೊ ಅರ್ಥವಾಗದಂತಿದೆ. ಮೂರು ವಾಕ್ಯಗಳಲ್ಲಿ ದೇವರು ಎನ್ನುವ ಮಾತು ಎರಡು ವಾಕ್ಯಗಳಲ್ಲಿ ಇದೆ. ಅಷ್ಟೇ ಹೊರತು ಜ್ಞಾನ, ಆತ್ಮ ಎನ್ನುವ ವಿಷಯಗಳು ಎಲ್ಲಿ ಇವೆಯೋ ಗುರುತಿಸಲಾರದ ವಿಧವಾಗಿ ಇವೆ. ಈಗ ಮೂರು ವಾಕ್ಯಗಳಲ್ಲಿ ಮೊದಲ ವಾಕ್ಯವನ್ನು ತೆಗೆದುಕೊಳ್ಳೋಣ.

ಮೊದಲ ಮಾತಿನಲ್ಲಿ **ಆದಿಯಲ್ಲಿ ವಾಕ್ಯವಿತ್ತು** ಎಂದು ಇದೆ ಅಲ್ಲವೆ! ಇದರಲ್ಲಿ ವಾಕ್ಯ ಎಂದರೆ ಅದು ನಿನಗೆ ತಿಳಿದ ಭಾಷೆಯಲ್ಲಿ ಇರಬಹುದು, ಇರದೆಹೋಗಬಹುದು. ನಿನಗೆ ಕನ್ನಡ ಭಾಷೆ ಮಾತ್ರವೇ ಬರುತ್ತದೆ ಎಂದುಕೊಳ್ಳೋಣ. ವಾಕ್ಯ ಬೇರೆ ಭಾಷೆಯಲ್ಲಿ ನಿನಗೆ ತಿಳಿಯದ ಭಾಷೆಯಲ್ಲಿ ಇರಬಹುದು. ವಾಕ್ಯ ಎಂದರೆ! ವಾಕ್ಕು ಮುಖಾಂತರ ಬರುವುದು ವಾಕ್ಯ. ವಾಕ್ಕು ಎಂದರೆ! ಬಾಯಿಂದ ಬರುವ ಶಬ್ದವನ್ನು ವಾಕ್ಕು ಎಂದು ಕರೆಯುತ್ತೇವೆ. ಶಬ್ದ ಎಂದರೆ ಕೇಳಿಸುವುದು. ಕೇಳಿಸುವ ಶಬ್ದ ದೊಡ್ಡದು ಆಗಬಹುದು, ಚಿಕ್ಕದು ಆಗಬಹುದು. ಕೇಳಿಸುವ ಶಬ್ದವನ್ನನುಸರಿಸಿ ವಾಕ್ಯ ದೊಡ್ಡದೆಂದೊ ಅಥವಾ ಚಿಕ್ಕದೆಂದೋ ಹೇಳಬಹುದು. ಕೇಳಿಸುವ ಶಬ್ದವೊಂದರ ಆಲಿಸುವಿಕೆ ದೊಡ್ಡದಾಗಿ ಚಿಕ್ಕದಾಗಿ ಅಲ್ಲದೆ ಶಬ್ದ ದೊಡ್ಡದಾಗಿ ಇರಬಹುದು ಅಥವಾ ಚಿಕ್ಕದಾಗಿ ಇರಬಹುದು. ವಾಕ್ಯ ನಿನಗೆ ತಿಳಿದ ಭಾಷೆಯಲ್ಲಿಯೇ ಇರುತ್ತದೆಂದಾಗಲಿ, ವಾಕ್ಯ ಇಷ್ಟೇ ಉದ್ದ ಇಲ್ಲವೆ ಚಿಕ್ಕದು ಇದೆಯೆಂದಾಗಲಿ, ವಾಕ್ಯ ಚಿಕ್ಕ ಶಬ್ದದಿಂದ ಹೇಳುವುದೆಂದಾಗಲಿ, ಅಥವಾ ದೊಡ್ಡ ಶಬ್ದದಿಂದಲೇ ಹೇಳುವುದೆಂದಾಗಲಿ ಹೇಳಲಾರೆವು. ವಾಕ್ಯ ಭಾಷೆಯಲ್ಲಾಗಲಿ, ದೊಡ್ಡ ಚಿಕ್ಕ ಶಬ್ದಗಳಲ್ಲಾಗಲಿ, ಉದ್ದ ಚಿಕ್ಕದಲ್ಲಾದರೂ ಇರಬಹುದು. ಹೀಗೆ ಇರುತ್ತದೆಂದು ಹೇಳಲಾರೆವು. ವಾಕ್ಯ ಹೇಗಾದರೂ ಇರಬಹುದು. ಈಗ **ಆದಿಯಲ್ಲಿ ವಾಕ್ಯವಿತ್ತು** ಎನ್ನುವ ಮಾತನ್ನು ತೆಗೆದುಕೊಂಡು ನೋಡಿದರೆ ವಾಕ್ಯ ಹೇಳಿರುವುದು ಆದಿಯಲ್ಲಿಯೆಂದು ತಿಳಿಯುತ್ತಿದೆ. ಆದಿಯಲ್ಲಿ ಮನುಷ್ಯರಿಗೆ ಯಾವ ಭಾಷೆ ಬರುವುದಿಲ್ಲ. ಆಗ ಯಾವ ಭಾಷೆಯಲ್ಲಿ ವಾಕ್ಯ ಹೇಳಲ್ಪಟ್ಟಿದೆಯೆಂದು ಪ್ರಶ್ನೆ ಬರಬಹುದು. ಆದಿಯಲ್ಲಿ ನಡೆದ ಯಥಾರ್ಥವನ್ನು ಗಮನಿಸಿದರೆ ಎಲ್ಲಾ ಪ್ರಶ್ನೆಗಳಿಗೆ ಉತ್ತರ ದೊರೆಯುತ್ತದೆ.

ಆದಿಯಲ್ಲಿ ಶಬ್ದ ಎಲ್ಲಿಂದ ಬಂದಿರುವುದು? ಎಂದು ಪ್ರಶ್ನಿಸಿಕೊಂಡು ನೋಡಿದರೆ ಮನುಷ್ಯನ ಕಿವಿಗೆ ಕೇಳಿಸುವ ಶಬ್ದ ಪ್ರಕೃತಿಯಿಂದಲೇ ಉಂಟಾಗಿದೆ ಯೆಂದು ಹೇಳಬಹುದು. ಪ್ರಕೃತಿ ಐದು ಭೂತಗಳಾಗಿ ಇದೆ. ಭೂತ ಎಂದರೆ ಜೀವ ಎಂದು ಅರ್ಥ. ಜೀವವಿರುವ ಆಕಾಶದಲ್ಲಿ ಆದಿಯಲ್ಲಿ ಶಬ್ದ ಏರ್ಪ

ಟ್ಟಿದೆಯೆಂದು ಅಲ್ಲಿಗೆ ಹೋಗಿ ನೋಡಿದರೆ ತಿಳಿದುಹೋಗುತ್ತಿದೆ. ಆಕಾಶ ಶೂನ್ಯವಾಗಿದೆ. ಅದು ಹೇಗೆ ಶಬ್ದ ಮಾಡುತ್ತದೆ? ಎನ್ನುವ ಪ್ರಶ್ನೆ ಕೂಡಾ ಬರುತ್ತದೆ. ಹೇತುವಾದ ಪದ್ಧತಿಯಲ್ಲಿ ಈ ಪ್ರಶ್ನೆಗಳು ತಪ್ಪದೆ ಬರಬೇಕಾಗಿದ್ದೇ. ಅವುಗಳಿಗೆ ಉತ್ತರಗಳು ತಿಳಿಯಬೇಕಾಗಿದ್ದೇ. ಆಗಲೇ ಶಾಸ್ತ್ರಪದ್ಧತಿಯಾಗುತ್ತದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ನೋಡಿದರೆ, ಶಬ್ದವನ್ನು ಆಕಾಶ ಸ್ವತಃವಾಗಿ ಮಾಡಿದೆಯಾ ಎಂದು ನೋಡಿದರೆ ಆಕಾಶ ಒಬ್ಬ ಜೀವಿಯೇ ಆಗಿರುವುದರಿಂದ ಜೀವಾತ್ಮಗೆ ಏನು ಕೈಲಾಗುವುದಿಲ್ಲ, ಏನು ಮಾಡಲಿಲ್ಲ ಎನ್ನುವ ಶಾಸ್ತ್ರವಿದಿ ಇದೆ. ಅದನ್ನು ಜೀವಾತ್ಮ ಧರ್ಮ ಎಂದು ಹೇಳಬಹುದು. ಪರಮಾತ್ಮಗು ಕೂಡಾ ಧರ್ಮವಿದೆ. ಪರಮಾತ್ಮ (ದೇವರು) ನಾಮ, ರೂಪ, ಕ್ರಿಯೆ ಇಲ್ಲದವನೆಂದು ಅದೇ ದೇವರ ಪ್ರಥಮ ಧರ್ಮವೆಂದು ಹೇಳಬಹುದು. ದೇವರು ಕ್ರಿಯಾ ರಹಿತನು ಎಂದರೆ ಕೆಲಸ ಮಾಡುವುದಿಲ್ಲ. ಜೀವಾತ್ಮ ಧರ್ಮದ ಪ್ರಕಾರ ಜೀವಿಯು ಕೈಲಾಗದವನಾಗಿ ಮಾಡಲಾರನು, ದೇವರು ಕೈಲಾದವ ನಾದರೂ ಮಾಡುವುದಿಲ್ಲ. ಈ ವಿಧವಾಗಿ ಜೀವಿಗು, ದೇವರಿಗು ವಿರುದ್ಧವಾದ ಧರ್ಮಗಳು ಇವೆ. ಆದಿಯಲ್ಲಿ ವಾಕ್ಯ ಆಕಾಶದ ಮೂಲಕ ಬಂದರೆ, ಆಕಾಶ ಒಂದು ಜೀವಾತ್ಮವೇ ಆಗಿರುವುದರಿಂದ ಆಕಾಶ ಎನ್ನುವ ಜೀವಾತ್ಮ ಆ ಶಬ್ದವನ್ನು ಮಾಡಲಿಲ್ಲ. ಆಕಾಶದಿಂದ ಶಬ್ದ ಬಂದಿರುವುದು ವಾಸ್ತವವೇ. ಆದರೂ ಆಕಾಶ ಜೀವಾತ್ಮ ಶಬ್ದವನ್ನು ಮಾಡುವ ಸಾಮರ್ಥ್ಯ, ಬಲ ಇಲ್ಲದವನು. ಆದುದರಿಂದ ಆಕಾಶದ ಹಿಂದೆ ಯಾರೋ ಇದ್ದು ಶಬ್ದ ಮಾಡಿರಬಹುದು. ಆದರೆ ದೇವರು ಕೂಡಾ ಕೆಲಸ ಮಾಡದವನು, ಆದ್ದರಿಂದ ದೇವರು ಕೂಡಾ ಆ ಶಬ್ದ ಮಾಡಲಿಲ್ಲ. ಆಕಾಶದಿಂದ ಶಬ್ದ ಬಂದಿರುವುದು ವಾಸ್ತವವೇ ಆದರೂ, ಆ ಶಬ್ದಕ್ಕೆ ಕಾರಣ ಆಕಾಶ ಜೀವಿ ಅಲ್ಲ, ದೇವರು ಅಲ್ಲ. ಇಬ್ಬರೂ ಅಲ್ಲದೆ ಮತ್ತೊಬ್ಬನು ಯಾರೋ ಇನ್ನೊಬ್ಬನು ಇದ್ದು ಆ ಶಬ್ದವನ್ನು ಮಾಡಿರಬಹುದು ಎಂದು ಅನುಮಾನ ಬಂದಿದೆ.

ಈ ಅನುಮಾನ ತೀರುವುದಕ್ಕೆ ವಿಶ್ವದಲ್ಲಿ ಯಾರ್‍ಯಾರು ಇದ್ದಾರೊ ಮೊದಲು ಗಮನಿಸಬೇಕಾದ ಅಗತ್ಯವಿದೆ. ದೇವರು ಮೊದಲು ವಿಶ್ವವನ್ನು ಸೃಷ್ಠಿಸಿದ್ದಾನೆ. ಆಗ ದೇವರು ದೇವರಾಗಿಯೇ ಇರುತ್ತಾ ಮೊದಲು ತನ್ನಿಂದ ಪ್ರಕೃತಿ ಎನ್ನುವುದನ್ನು ತಯಾರು ಮಾಡಿದ್ದಾನೆ. ಪ್ರಕೃತಿ ಐದು ಭಾಗಗಾಳಗಿ ಇರುವಂತೆ ಸೃಷ್ಠಿಸಿದ್ದಾನೆ. ನಂತರ ಅದು ನಿರ್ಜಿವವಾಗಿರುವುದರಿಂದ ಅದನ್ನು ಚೈತನ್ಯವಾಗಿ ಮಾಡುವುದಕ್ಕೆ ತನ್ನಿಂದ ಆತ್ಮವನ್ನು, ಜೀವಾತ್ಮವನ್ನು ಎರಡನ್ನು ತಯಾರು ಮಾಡಿದ್ದಾನೆ. ದೇವರು ತನ್ನಂತೆ ಪುರುಷತ್ವ ಇರುವ ಜೀವಾತ್ಮ, ಆತ್ಮವನ್ನು ತಯಾರು ಮಾಡಿ ಜೀವಾತ್ಮ ನಡೆಯಲ್ಪಡುವವನಾಗಿ, ಆತ್ಮ ನಡೆಸುವವನಾಗಿ ಇರುವಂತೆ ಮಾಡಿದ್ದಾನೆ. ಸಕಲ ಕಾರ್ಯಗಳನ್ನು ಮಾಡುವುದಕ್ಕೆ ಆತ್ಮವನ್ನು ನೇಮಿಸಿದ್ದಾನೆ. ಪ್ರತಿ ಶರೀರದಲ್ಲಿಯು ಜೀವಾತ್ಮ ಇದ್ದರೆ ಜೀವಾತ್ಮದೊಂದಿಗೆ ಆತ್ಮ ಇರುತ್ತಾ ಶರೀರದಲ್ಲಿ ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಆತ್ಮ ವಿಷಯ ಎಷ್ಟೋ ದೊಡ್ಡ ಜ್ಞಾನಿಗಳಾದವರಿಗು ಕೂಡಾ ತಿಳಿದಿಲ್ಲವೆಂದು ದೇವರೇ ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಪ್ರಯತ್ನಿಸುವ ಯೋಗಿಗಳಿಗೆ ಮಾತ್ರವೇ ಆತ್ಮ ತಿಳಿಯಬಲ್ಲದೆಂದು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹನ್ನೊಂದನೆ (11) ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಆತ್ಮ ಶರೀರದಲ್ಲಿ ತಿಳಿಯದಂತೆ ಅಡಗಿದೆಯೆಂದು ತಿಳಿಯಬೇಕು.

ದೇವರು ಕೆಲಸ ಮಾಡದವನು ಅಲ್ಲವೆ! ಏನು ಮಾಡದವನು ಪ್ರಕೃತಿಯನ್ನು, ಉಳಿದ ಎರಡು ಆತ್ಮಗಳನ್ನು ಹೇಗೆ ಮಾಡಿದ್ದಾನೆ? ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ದೇವರು ಕ್ರಿಯಾರಹಿತನು ಕೆಲಸಮಾಡುವುದಿಲ್ಲ ಎನ್ನುವಮಾತು ವಾಸ್ತವವೇ. ಅದು ಸೃಷ್ಟಿಯನ್ನು ತಯಾರುಮಾಡಿದ ನಂತರ, ಆತ್ಮವನ್ನು ಜೀವಾತ್ಮವನ್ನು ತಯಾರು ಮಾಡಿದ ನಂತರ ಹೇಳಲ್ಪಟ್ಟ ಧರ್ಮ. ಸೃಷ್ಟಿಗೆ ಪೂರ್ವದಲ್ಲಿ ದೇವರು ಕೆಲಸ ಮಾಡುವವನು. ಆಗ ಸೃಷ್ಟಿಗೆ ಮೊದಲು ದೇವರು ಒಬ್ಬನೇ ಇದ್ದಾನೆ. ದೇವರು ಹೊರತು ಯಾರೂ ಇಲ್ಲ. ಆದುದರಿಂದ ಸೃಷ್ಟಿಯನ್ನು ತಯಾರು ಮಾಡದ

ಮುನ್ನ ದೇವರು ಕಾರ್ಯಗಳನ್ನು ಮಾಡುತ್ತಿದ್ದನು. ದೇವರು ಮಾಡಿದರೇನೆ ಪ್ರಪಂಚ ತಯಾರಾಗಿದೆ. ಪ್ರಪಂಚ ತಯಾರಾದ ನಂತರ ಜೀವಾತ್ಮ, ಆತ್ಮವನ್ನು ದೇವರು ತಯಾರು ಮಾಡಿದ ನಂತರ ದೇವರ ಧರ್ಮ ತಯಾರಾಗಿದೆ. ಸೃಷ್ಠಿ ನಂತರ ದೇವರು ಕೆಲಸ ಮಾಡದವನೆಂದು, ಸೃಷ್ಠಿಗೆ ಪೂರ್ವದಲ್ಲಿ ಕೆಲಸ ಮಾಡುವವನೆಂದು ತಿಳಿದಿದೆ. ದೇವರು ಕ್ರಿಯೆಗಳೆಲ್ಲವನ್ನು ಆತ್ಮಗೆ ಒಪ್ಪಿಸಿ, ಆತ್ಮದಿಂದ ಮಾಡಿಸಿದಂತೆ ನಿರ್ಣಯಿಸಿ, ತಾನು ಏನು ಮಾಡದವನಾಗಿದ್ದಾನೆ. ಆದ್ದರಿಂದ ಆತ್ಮವನ್ನು ತಯಾರು ಮಾಡಿದ ಪರಮಾತ್ಮ ತಾನು ಕೆಲಸಗಳು ಮಾಡದಂತೆ ಬಿಟ್ಟಿದ್ದಾನೆ. ದೇವರು ಮಾಡಬೇಕಾದ ಕೆಲಸವೆಲ್ಲವನ್ನು ಆತ್ಮವೇ ಮಾಡುತ್ತಿದೆ. ಆತ್ಮ ಕೆಲಸಗಳು ಮಾಡುತ್ತಿರುವಾಗ ಪರಮಾತ್ಮ ಏನು ಮಾಡದೆ ಕೇವಲ ಸಾಕ್ಷಿಯಾಗಿ ನೋಡುತ್ತಾ ಸುಮ್ಮನೆ ಇದ್ದಾನೆ.

ದೇವರು ಏನೂ ಮಾಡದವನು ಆಗಿರುವುದರಿಂದ, ಜೀವಾತ್ಮ ಏನೂ ಕೈಲಾಗದವನಾದ್ದರಿಂದ, ಎಲ್ಲಾ ಮಾಡುವವನು ಆತ್ಮ ಆಗಿರುವುದರಿಂದ, ಆದಿಯಲ್ಲಿ ಆಕಾಶದಿಂದ ಶಬ್ದ ಮಾಡಿರುವುದು ಆತ್ಮವೇ ಎಂದು ಹೇಳಬಹುದು. ಆತ್ಮ ಆಕಾಶದಲ್ಲಿ ಅಡಗಿದ್ದು ಆಕಾಶದಿಂದ ಶಬ್ದ ಮಾಡಿದೆ. ಆತ್ಮ ಮಾಡಿರುವ ಶಬ್ದ ದೇವರ ಜ್ಞಾನವಾಗಿತ್ತು. ಆದ್ದರಿಂದ ಆ ಶಬ್ದವನ್ನು 'ವಾಕ್ಯ' ಎಂದಿದ್ದಾರೆ. ವಾಕ್ಯ ಎಂದರೇ 'ಭಾವನೆಯಿಂದ ಕೂಡಿಕೊಂಡ ಶಬ್ದ' ಎಂದು ಅರ್ಥ. ಸೃಷ್ಟಿ ಆದಿಯಲ್ಲಿ ಆಕಾಶದಿಂದ ಭಾವದಿಂದ ಕೂಡಿಕೊಂಡ ಶಬ್ದ ಬಂದಿದೆಯೆಂದು ಹೇಳುತ್ತಾ "ಆದಿಯಲ್ಲಿ ವಾಕ್ಯವಿತ್ತು" ಎಂದಿದ್ದಾರೆ. ವಾಕ್ಯವೆಂದರೇ ಏನು? ಅದನ್ನು ಹೇಳಿರುವವರು ಯಾರು? ಎಂದು ತಿಳಿದುಕೊಂಡಿದ್ದೇವೆ. ಜ್ಞಾನದಿಂದ ಕೂಡಿಕೊಂಡಿರುವುದೇ ವಾಕ್ಯ. ವಾಕ್ಯವನ್ನು ಶಬ್ದ ರೂಪದಲ್ಲಿ ಹೇಳಿರುವುದು ಆತ್ಮ. ಆತ್ಮ ಆಕಾಶದಿಂದ ಹೇಳಿದ ಜ್ಞಾನವೇ ಪ್ರಪಂಚಕ್ಕೆ ಮೊದಲ ಜ್ಞಾನ. ಆಕಾಶದಿಂದ ಮೊದಲು ಹೊರಟು ಬಂದಿರುವ ಶಬ್ದ ಜ್ಞಾನವೇ ಆದರೂ, ಅದು ಗುಡುಗುಗಳ ರೂಪದಲ್ಲಿ ದೊಡ್ಡ ದೊಡ್ಡ ಶಬ್ದಗಳಾಗಿ ಇತ್ತು. ಅದು ಮನುಷ್ಯರು ಅರ್ಥಮಾಡಿಕೊಳ್ಳುವ ಭಾಷೆಯಲ್ಲ. ಗುಡುಗುಗಳ ಶಬ್ದದಿಂದಿರುವ

ಭಾಷೆಯನ್ನು ಆಕಾಶದಲ್ಲಿರುವ ಸೂರ್ಯನು ಗ್ರಹಿಸಿದ್ದಾನೆ. ಅದು ಮನುಷ್ಯರಿಗೆ ಅರ್ಥವಾಗದ ಭಾಷೆಯೆಂದು ತಿಳಿದು, ಸೂರ್ಯನು ಮನುಷ್ಯರ ಭಾಷೆಯಲ್ಲಿ ಭೂಮಿಮೇಲಿರುವ ಮನುವು ಎಂಬ ವ್ಯಕ್ತಿಗೆ ತಾನು ಶಬ್ದಗಳ ರೂಪದಲ್ಲಿ ಗ್ರಹಿಸಿದ ಜ್ಞಾನವನ್ನು ತಿಳಿಸುವುದು ನಡೆದಿದೆ.

ಸೃಷ್ಟಿ ಆದಿಯಲ್ಲಿ ಅರ್ಥವಾಗದ ಶಬ್ದ ಜ್ಞಾನರೂಪದಲ್ಲಿ ಬಂದಿರುವುದರಿಂದ ಅದನ್ನು **ಆದಿಯಲ್ಲಿ ವಾಕ್ಯವಿತ್ತು** ಎಂದು ಯೋಹಾನ್ ಸುವಾರ್ತೆ ಮೊದಲ ಅಧ್ಯಾಯ ಮೊದಲ ವಾಕ್ಯದಲ್ಲಿ ಹೇಳುವುದಾಗಿದೆ. ಶಬ್ದ ಜ್ಞಾನವೆಂದು ಮನುಷ್ಯರಿಗೆ ಆ ದಿನ ತಿಳಿದಿಲ್ಲ. ಅದನ್ನು ಸೂರ್ಯನು ಹೇಳಿರುವಾಗ ಸ್ವಲ್ಪ ಅರ್ಥವಾಗಿದೆ. ಅದೇ ಜ್ಞಾನವನ್ನೇ ಕೃಷ್ಣನು ಭಗವದ್ಗೀತೆಯಾಗಿ ಹೇಳಿದ್ದಾನೆ. ಭಗವದ್ಗೀತೆಯನ್ನು ಹೇಳಿದಾಗ ಇದು ಸೃಷ್ಟಿ ಆದಿಯಲ್ಲಿ ಹೇಳಲಾಗಿರುವ ಜ್ಞಾನವೆಂದು ಕೃಷ್ಣನು ಹೇಳಿದರೂ, ಮನುಷ್ಯರ ದೃಷ್ಟಿಯಲ್ಲಿ ಆದಿಯಲ್ಲಿನ ಶಬ್ದವಾದ ಗುಡುಗುಗಳ ಹತ್ತಿರಕ್ಕೆ ಹೋಗಲಿಲ್ಲ. ಗುಡುಗುಗಳ ಶಬ್ದವೇ ಭಗವದ್ಗೀತೆ ಜ್ಞಾನವೆಂದು ಇಂದಿಗೂ ಯಾರಿಗೂ ತಿಳಿದಿಲ್ಲ. ಕೃಷ್ಣನು ಹೇಳಿರುವ ಜ್ಞಾನವನ್ನೇ ಸೂರ್ಯನು ಮನುವಿಗೆ ಹೇಳಿದ್ದಾನೆ. ಸೂರ್ಯನು ಹೇಳಿರುವ ಜ್ಞಾನ ಆಕಾಶ ಗುಡುಗುಗಳ ಶಬ್ದಜ್ಞಾನ. ಆಕಾಶ ಶಬ್ದಗಳ ಜ್ಞಾನ ಆಕಾಶ ಆತ್ಮ ಹತ್ತಿರದಿಂದ ಬಂದಿರುವ ಜ್ಞಾನ. ಆತ್ಮ ಹತ್ತಿರದಿಂದ ಬಂದಿರುವ ಆತ್ಮಜ್ಞಾನ ಆತ್ಮ ಒಳಗಿನಿಂದ ಬಂದಿರುವುದು. ಆತ್ಮದೊಳಗಿನಿಂದ ಬಂದಿರುವ ಜ್ಞಾನವನ್ನು ನೋಡಿದರೆ ಆತ್ಮವೇ ಜ್ಞಾನವಾಗಿ ಬದಲಾಗಿ ಆತ್ಮನಿಂದ ಹೊರಗೆ ಬಂದಿದೆ. ಹತ್ತಿಯಿಂದ ದಾರ ಹೊರಬಂದಂತೆ, ಆತ್ಮನೊಳಗಿನಿಂದ ಜ್ಞಾನ ಹೊರಗೆ ಬಂದಿದೆ. ಹತ್ತಿ ದಾರವಾಗಿ ಹೇಗೆ ಬದಲಾಗಿ ಹತ್ತಿಯಿಂದ ದಾರ ಹೊರ ಬರುತ್ತಿದೆಯೋ, ಹಾಗೆಯೇ ಆತ್ಮನಿಂದ ಜ್ಞಾನ ತಯಾರಾಗುತ್ತಾ ಹೊರ ಬರುತ್ತಿದೆ. ಹತ್ತಿ ಬೇರೆ, ದಾರ ಬೇರೆಯಾದರೂ, ಹತ್ತಿಯೇ ದಾರವಾಗಿ ಬದಲಾಗಿದೆಯೆಂದು ಹೇಳಬಹುದು. ಹಾಗೆಯೇ ಆತ್ಮ ಬೇರೆ, ಜ್ಞಾನ ಬೇರೆಯಾದರೂ, ಆತ್ಮದಿಂದಲೇ ಆತ್ಮಜ್ಞಾನ ಹೊರಗೆ ಬರುತ್ತಿದೆ. ದಾರವನ್ನು ಬೇರ್ಪಡಿಸಿ ನೋಡಿದರೇ ಅದರಲ್ಲಿ ಹತ್ತಿಯ

ಎಳೆಗಳೇ ಇರುವಹಾಗೆ, ಆತ್ಮಜ್ಞಾನವನ್ನು ಬೇರ್ಪಡಿಸಿ ನೋಡಿದರೇ ಅದರಲ್ಲಿ ಆತ್ಮ ವಿಧಾನವೇ ಇರುತ್ತದೆ.

ಆದಿಯಲ್ಲಿ ಆಕಾಶ ಶಬ್ದದಿಂದ ದೇವರು ಜ್ಞಾನವನ್ನು ಹೇಳುವುದಾಗಿದೆಯೆಂದು, ಅದನ್ನೇ ಖುರಾನ್ ಗ್ರಂಥದಲ್ಲಿ ದೇವರು ಜ್ಞಾನವನ್ನು ತಿಳಿಸುವ ಮೂರು ವಿಧಾನಗಳಲ್ಲಿ ಒಂದು ಆಕಾಶವಾಣಿಯಿಂದ (ವಹೀಯಿಂದ) ತಿಳಿಸಲಾಗುವುದೆಂದು ಸುರಾ 42 ಆಯತ್ 51ರಲ್ಲಿ ಹೇಳುವುದಾಗಿದೆ. ದೇವರು ಸೃಷ್ಟಿ ಆದಿಯಲ್ಲಿಯೇ ಆಕಾಶ ಎನ್ನುವ ಜೀವಾತ್ಮನೊಳಗೆ ಇರುವ ಆತ್ಮನಿಂದ ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ಆಗ ಗುಡುಗುಗಳ ರೂಪದಲ್ಲಿ ಬಂದಿರುವ ಜ್ಞಾನ ಮನುಷ್ಯರಿಗೆ ಅರ್ಥವಾಗುವುದಿಲ್ಲ, ಅದು ಮನುಷ್ಯರ ಭಾಷೆ ಅಲ್ಲ. ಆದ್ದರಿಂದ ಗುಡುಗುಗಳ ಜ್ಞಾನವನ್ನು ಗ್ರಹಿಸಿದ ಸೂರ್ಯನು ಮನುಷ್ಯರ ಭಾಷೆಯಲ್ಲಿ ಭೂಮಿಮೇಲೆ ಒಬ್ಬ ಮನುಷ್ಯನಿಗೆ ಹೇಳಿದಾಗ ಅದು ಭೂಮಂಡಲವೆಲ್ಲಾ ಹರಡಿಹೋಗಿದೆ. ಕಾಲಕಳೆದಂತೆಲ್ಲಾ ಅಧರ್ಮಗಳು ವಿಜೃಂಭಿಸಿ ಧರ್ಮಗಳು ಇಲ್ಲದಂತೆ ಹೋಗುವ ಸಮಯದಲ್ಲಿ ಆದಿಯಲ್ಲಿನ ಜ್ಞಾನ ಮನುಷ್ಯರಲ್ಲಿ ಇಲ್ಲದಂತೆ ಹೋಗಿದೆ. ಆಗ ಕೃಷ್ಣನಾಗಿ ಭಗವಂತನು ಬಂದು ಸೂರ್ಯನು ಹೇಳಿರುವ ಜ್ಞಾನವನ್ನೇ ಈಗ ನಿನಗೆ ಹೇಳುತ್ತಿದ್ದೇನೆಂದು ದ್ವಾಪರ ಯುಗದಲ್ಲಿ ಅರ್ಜುನನಿಗೆ ಹೇಳಿದ್ದಾನೆ. ಅದು ಗ್ರಂಥರೂಪದಲ್ಲಿ ಪ್ರಥಮ ದೈವಗ್ರಂಥವಾಗಿ ನಮ್ಮ ಮುಂದೆ ಇದ್ದರೂ, ಅದು ಸೂರ್ಯನು ಹೇಳಿರುವ ಜ್ಞಾನವೆಂದಾಗಲೀ, ಸೂರ್ಯನು ಗ್ರಹಿಸಿದ ಆಕಾಶ ಶಬ್ದಗಳ ಜ್ಞಾನವೆಂದಾಗಲೀ ನಮ್ಮ ಜ್ಞಾಪಕದಲ್ಲಿ ಇಲ್ಲ. ಹಿಂದಿನ ವಿಷಯವನ್ನು ಎಲ್ಲರೂ ಮರೆತುಹೋಗಿದ್ದಾರೆ.

ಮನುಷ್ಯರು ದೇವರು ಕಳುಹಿಸಿದ ಜ್ಞಾನವನ್ನು ಮರೆತು ಹೋಗಿದ್ದಾರೆನ್ನುವ ಉದ್ದೇಶದಿಂದ ಭಗವದ್ಗೀತೆಯನ್ನು ಹೇಳಿದ ನಂತರ ಮೂರು ಸಾವಿರ ವರ್ಷಗಳಿಗೆ ದ್ವಿತೀಯ ದೈವಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ ಮೂರು ಪ್ರಥಮವಾಕ್ಯಗಳನ್ನು ಹೇಳುವುದಾಗಿದೆ. ಇಲ್ಲಿ ಹೇಳಿರುವ ವಾಕ್ಯದ ಪ್ರಕಾರ **ಆದಿಯಲ್ಲಿ ವಾಕ್ಯವಿತ್ತು** ಎನ್ನುವ ಮಾತು ಅರ್ಥವಾಗಿದೆ. ಅದರ ನಂತರ

ಎರಡನೆಯ ವಾಕ್ಯವನ್ನು ಬೇರ್ಪಡಿಸಿ ನೋಡಿದರೆ, ಗುಡುಗಿ ಹೇಳಿದ ಜ್ಞಾನ ಶಬ್ದ ಆಕಾಶ ಆತ್ಮ ಹತ್ತಿರದಿಂದ ಬಂದಿರುವುದೆಂದು ತಿಳಿದಿದೆ. ಆದ್ದರಿಂದ **ವಾಕ್ಯ ದೇವರ ಹತ್ತಿರ ಇತ್ತು** ಎಂದು ತಿಳಿದಿದೆ. ಇನ್ನೂ ಆಳವಾಗಿ ನೋಡಿದರೆ ವಾಕ್ಯ ಎನ್ನುವ ಶಬ್ದ ಆತ್ಮನೊಳಗಿನಿಂದ ಹುಟ್ಟಿಕೊಂಡು ಬಂದಿದೆಯೆಂದು ತಿಳಿದಿದೆ. ಹತ್ತಿ ತಿರುವುಗಳಿಂದ ದಾರ ಹುರಿಯಾಗಿ ಹೊರಗೆ ಬಂದಹಾಗೆ, ಆತ್ಮ ಚೈತನ್ಯವೇ ಶಕ್ತಿಯಾಗಿ ಬದಲಾಗಿ, ಶಕ್ತಿ ರೂಪದಲ್ಲಿನ ಜ್ಞಾನ ಶಬ್ದರೂಪದಲ್ಲಿ ಹೊರಗೆಬಂದಿದೆ. ದಾರದಲ್ಲಿ ಹತ್ತಿ ಎಳೆಗಳು ಇರುವಂತೆ, ಜ್ಞಾನ ಶಬ್ದದಲ್ಲಿ ಆತ್ಮಶಕ್ತಿಯೇ ಇದೆಯೆಂದು ತಿಳಿಯುತ್ತಿದೆ. ಆತ್ಮಜ್ಞಾನ ಆತ್ಮ ಶಕ್ತಿಯಾಗಿ, ಆತ್ಮವಾಗಿ ಇದೆಯೆಂದು ತಿಳಿಯುತ್ತಿದೆ. ಆದ್ದರಿಂದ ಆತ್ಮಜ್ಞಾನ ಆತ್ಮ ಎರಡೂ ಒಂದೇಯೆಂದು ತಿಳಿಯುತ್ತಿದೆ. ಅದನ್ನೇ **ವಾಕ್ಯ ದೇವರಾಗಿ ಇದ್ದನು** ಎಂದು ಹೇಳಿದ್ದಾರೆ.

ಇಲ್ಲಿಯವರೆಗು ದೇವರು ಜೀವಾತ್ಮನನ್ನು, ಆತ್ಮನನ್ನು ಸೃಷ್ಟಿಸಿದ್ದಾನೆಂದು ಹೇಳಿದ್ದೇವೆ. ಸೃಷ್ಟಿ ನಡೆಯುವುದಕ್ಕಿಂತ ಮೊದಲು ದೇವರು ಕೆಲಸ ಮಾಡುತ್ತಿದ್ದನು. ಸೃಷ್ಟಿ ನಡೆದ ನಂತರ ಕೆಲಸವನ್ನು ಆತ್ಮ ಮಾಡುವಂತೆ ಅಧಿಕಾರಕೊಟ್ಟು, ತಾನು ಇದ್ದರೂ ಇಲ್ಲದಂತೆ ಬದಲಾಗಿ ಹೋಗಿದ್ದಾನೆ. ದೇವರು ಯಾವ ಕಾರ್ಯವನ್ನು ಮಾಡದವನಾಗಿ ತನ್ನ ಇರುವಿಕೆ ಯಾರಿಗೂ ಯಾವ ಕಾರಣಕ್ಕೂ ತಿಳಿಯದಂತೆ ಮಾಡಿದ್ದಾನೆ. ದೇವರು ಪ್ರಪಂಚದೊಂದಿಗೆ ಯಾವ ಸಂಬಂಧ ಇಲ್ಲದಂತೆ ಹೋದ ನಂತರ ಆತನು ಇದ್ದರೂ ಇಲ್ಲದವನೊಂದಿಗೆ ಸಮಾನವಾಗಿ ಹೋಗಿದೆ. ಆಗ ದೇವರ ಕಾರ್ಯಗಳನ್ನು ಸಹ ಆತ್ಮವೇ ಮಾಡಬೇಕಾಗಿಬಂದಿದೆ. ಇತ್ತ ಜೀವಾತ್ಮನ ಕಾರ್ಯಗಳನ್ನೂ, ಅತ್ತ ಪರಮಾತ್ಮ ಕಾರ್ಯಗಳನ್ನೂ ಆತ್ಮ ಮಾಡುತ್ತಾ ತಾನು ಯಾರಿಗೂ ತಿಳಿಯದಂತೆ ನಡೆದುಕೊಳ್ಳುತ್ತಿದೆ. ಮೇಲಿನ ವಾಕ್ಯಗಳನ್ನು ಅನುಸರಿಸಿ ನೋಡಿದರೆ ಆತ್ಮ ವಿಧಾನವೆಲ್ಲವೂ ಹೊರಬೀಳುತ್ತಿದೆ. ಪರಮಾತ್ಮ ಸೃಷ್ಟಿಯನ್ನು ತಯಾರುಮಾಡಿದಾಗ ಮೂರು ಆತ್ಮಗಳು ಇದ್ದವು. ನಂತರ ಎರಡು ಆತ್ಮಗಳು ಮಾತ್ರವೇ ತಿಳಿದುಬರುತ್ತಿವೆ. ಜೀವಾತ್ಮ, ಆತ್ಮ ಇರುವಿಕೆ ಇರುವಾಗ, ಪರಮಾತ್ಮನ ಇರುವಿಕೆ ಇಲ್ಲದಂತೆ ಹೋಗಿದೆ. ಆದ್ದರಿಂದ ಸೃಷ್ಟಿ ನಂತರ ಆತ್ಮವೇ ಪರಮಾತ್ಮವಾಗಿ ಚಲಾವಣೆ ಆಗಬೇಕಾಗಿ ಬಂದಿದೆ.

ಆದ್ದರಿಂದ ಆತ್ಮವನ್ನು ದೇವರೆಂದು ಸಹ ಹೇಳಬೇಕಾಗಿ ಬಂದಿದೆ. ಆತ್ಮ, ದೇವರು (ಪರಮಾತ್ಮ) ಅಲ್ಲದಿದ್ದರೂ, ಕೊನೆಗೆ ದೇವರ ಸ್ಥಾನದಲ್ಲಿ ಸೇರಿಹೋಗಿ ದೇವರ ಕಾರ್ಯಗಳು ಮಾಡುತ್ತಿದೆ.

ಆತ್ಮಜ್ಞಾನ ಆತ್ಮನ ಹತ್ತಿರದಿಂದ ಬಂದಿರುವುದು. ಆತ್ಮನನ್ನು ದೇವರೆಂದು ಹೇಳುವುದರಿಂದ **ವಾಕ್ಯ ದೇವರ ಹತ್ತಿರ ಇತ್ತು** ಎಂದು ಹೇಳಬೇಕಾಗಿ ಬಂದಿದೆ ಆತ್ಮನನ್ನು ದೇವರೆಂದು ಅಂದುಕೊಂಡಾಗ ಈ ವಾಕ್ಯ ಸರಿಹೋಗುತ್ತದೆ. ಆತ್ಮ, ದೇವರು ಅಲ್ಲದಿದ್ದರೂ ದೇವರೆಂದು ಹೇಳಬೇಕಾಗಿ ಬಂದಿದೆ. ಆತ್ಮ, ದೇವರಾಗಿ ಇರುವ ಅಧಿಕಾರವನ್ನು ದೇವರೇ ಆತ್ಮನಿಗೆ ಕೊಡುವುದು ನಡೆದಿದೆ. ಆದ್ದರಿಂದ ವಾಕ್ಯ (ಜ್ಞಾನ) ಆತ್ಮವೇ ಆಗಿರುವಾಗ ಅದೇ ಜ್ಞಾನವೇ ಅಂದರೆ ಅದೇ ಆತ್ಮವೇ ದೇವರಾಗಿ ಇದೆಯೆಂದು ಹೇಳಬಹುದು. ಆದ್ದರಿಂದ ಯೋಹಾನ್ ಸುವಾರ್ತೆಯಲ್ಲಿ ವಾಸ್ತವವನ್ನು ಹೇಳುತ್ತಾ **ವಾಕ್ಯ ದೇವರಾಗಿ ಇತ್ತು** ಎಂದು ಹೇಳಿದ್ದಾರೆ ವಾಕ್ಯ ಎಂದರೇ ಏನು? ವಾಕ್ಯ ಆತ್ಮವಾಗಿ ಹೇಗಿದೆ? ಆತ್ಮ, ದೇವರಾಗಿ ಏಕೆ ಹೇಳಲ್ಪಡುತ್ತಿದೆ? ಎನ್ನುವ ವಿವರವೆಲ್ಲವೂ ತಿಳಿದ ನಂತರ ಯೋಹಾನ್ ಸುವಾರ್ತೆ ಮೊದಲ ಅಧ್ಯಾಯದಲ್ಲಿನ ಮೊದಲ ಮೂರು ವಾಕ್ಯಗಳಿಗೆ ಭಾವನೆ ಪೂರ್ತಿಯಾಗಿ ಅರ್ಥವಾಗಿರುತ್ತದೆಂದುಕೊಳ್ಳುತ್ತೇನೆ. ಇಷ್ಟು ವಿವರವಾಗಿ ಹೇಳಿದರೂ ಅರ್ಥವಾಗದಿದ್ದರೇ, ಆತ್ಮಜ್ಞಾನ ಎಂದಿಗೂ ಅರ್ಥವಾಗುವುದಿಲ್ಲ. ಆತ್ಮಜ್ಞಾನ ಅರ್ಥವಾಗದಿದ್ದರೇ ದೇವರ ವಿಧಾನ ಸ್ವಲ್ಪವಾದರೂ ತಿಳಿಯುವುದಿಲ್ಲ. ದೇವರ ವಿಧಾನ ತಿಳಿಯುವುದಕ್ಕೆ ವಾಕ್ಯ ಎನ್ನುವ ಜ್ಞಾನದಿಂದ ಪ್ರಾರಂಭವಾಗಬೇಕು. ಜ್ಞಾನ ತಿಳಿದರೇ ಜ್ಞಾನವೇ ಆತ್ಮವೆಂದೂ, ಆತ್ಮೇ ದೇವರೆಂದು ತಿಳಿಯಬಲ್ಲದು.

**ಸೃಷ್ಟಿ ನಡೆದಾಗ :– ದೇವರು (ಪರಮಾತ್ಮ) – ಪ್ರಕೃತಿ–ಆತ್ಮ–ಜೀವಾತ್ಮ**

**ಸೃಷ್ಟಿ ನಡೆದ ನಂತರ :– (ಪರಮಾತ್ಮ) – ಪ್ರಕೃತಿ–ಆತ್ಮ–ಜೀವಾತ್ಮ**

**ಸೃಷ್ಟಿ ನಡೆದ ನಂತರ :– ಆತ್ಮ (ದೇವರು) – ಪ್ರಕೃತಿ–ಆತ್ಮ–ಜೀವಾತ್ಮ**

ಸೃಷ್ಟಿ ನಡೆದಾಗ ದೇವರು ಕೆಲಸ ಮಾಡುವವನಾಗಿದ್ದು ತನ್ನಿಂದ ಒಬ್ಬ ಸ್ತ್ರೀ ತತ್ತ್ವವಿರುವ ಪ್ರಕೃತಿಯನ್ನು, ನಂತರ ಪುರುಷತತ್ತ್ವವಿರುವ ಆತ್ಮ, ಜೀವಾತ್ಮರನ್ನು ದೇವರು ತಯಾರು ಮಾಡಿದ್ದಾನೆ. ದೇವರು ಪುರುಷನಾಗಿದ್ದು ತನ್ನ ಹಾಗೆ ಪುರುಷ ತತ್ತ್ವವಿರುವ ಎರಡು ಆತ್ಮಗಳನ್ನು ತಯಾರು ಮಾಡಿದ್ದಾನೆ. ಅವುಗಳನ್ನೇ ಆತ್ಮ ಎಂದು ಒಂದನ್ನು, ಜೀವಾತ್ಮಯೆಂದು ಮತ್ತೊಂದನ್ನು ಹೇಳುತ್ತಿದ್ದೇವೆ. ದೇವರು ಸೃಷ್ಟಿಯನ್ನು ತಯಾರು ಮಾಡಿದ ನಂತರ ಪ್ರಕೃತಿ, ಆತ್ಮ, ಜೀವಾತ್ಮ ಏರ್ಪಟ್ಟ ನಂತರ ದೇವರು ಯಾವ ಕೆಲಸವನ್ನು ಮಾಡದವನಾಗಿ ಎಲ್ಲದಕ್ಕೂ ಎಂದರೆ ಪ್ರಕೃತಿಗೂ, ಆತ್ಮಗೂ, ಜೀವಾತ್ಮಗೂ ಸಾಕ್ಷಿಯಾಗಿ ಉಳಿದಿದ್ದಾನೆ. ಹಾಗೆ ಸ್ಥಬ್ದತೆಯಾಗಿರುವ ದೇವರು ಇದ್ದರೂ ಇಲ್ಲದಂತೇ ಆಗುತ್ತಿದೆ. ಯಾವಾಗಾದರೂ ಭೂಮಿಮೇಲೆ ಧರ್ಮಗಳಿಗೆ ಮುಪ್ಪು ಉಂಟಾಗಿ, ಅಧರ್ಮಗಳು ವಿಜೃಂಭಿಸಿದರೇ ಆಗ ತನ್ನ ಆತ್ಮವನ್ನು ಭಗವಂತನಾಗಿ ಕಳುಹಿಸಿ ಧರ್ಮಗಳನ್ನು ಪುನರುದ್ಧೀಕರಿಸುತ್ತಾನೆ. ಆಗಲೂ ಸಹ ಪ್ರತ್ಯೇಕವಾಗಿ ತನ್ನ ಪ್ರತಿನಿಧಿಯನ್ನು ತಯಾರು ಮಾಡುವುದರಿಂದ ತಾನು ಕೆಲಸ ಮಾಡದಂತೇ ಇರುತ್ತಿದ್ದಾನೆ. ಆದರೇ ಉಳಿದ ಕಾರ್ಯಗಳೆಲ್ಲವೂ ಆತ್ಮವೇ ಮಾಡುತ್ತಿದೆ. ಸೃಷ್ಟಿ ನಂತರ ದೇವರ ಸ್ಥಾನದಲ್ಲಿ ದೇವರು ಇಲ್ಲದಂತೆ ಹೋಗುವುದರಿಂದ ದೇವರಾಗಿ ಆತ್ಮವೇ ಕೆಲಸ ಮಾಡುತ್ತಾ ದೇವರಿರುವಂತೇ ಎಲ್ಲರನ್ನೂ ನಂಬಿಸುತ್ತಿದೆ. ವಾಸ್ತವವಾಗಿ ಸೃಷ್ಟಿ ನಂತರ ದೇವರು ನಿರುಪಯೋಗವಾಗಿ, ಏನೂ ಮಾಡದವನಾಗಿ ನಿಂತುಹೋಗಿದ್ದಾನೆ. ಆದ್ದರಿಂದ ದೇವರು ಇಲ್ಲದಂತೇ ಎಂದು ಹೇಳಬಹುದು. ದೇವರು ಇಲ್ಲದ ಕೊರತೆಯನ್ನು ಆತ್ಮ ತಿಳಿಯದಂತೆ ಮಾಡುತ್ತಿದೆ. ಹಾಗೆ ದೇವರ ವಿಷಯ ಹೊಂದಾಣಿಕೆ ಮಾಡುವುದಕ್ಕಾಗಿ ತಾನೇ ದೇವರಾಗಿ ಬದಲಾಗುತ್ತಿದೆ. ಆದ್ದರಿಂದ ದ್ವಿತೀಯ ದೈವಗ್ರಂಥದಲ್ಲಿ **ವಾಕ್ಯ ದೇವರಾಗಿ** ಇತ್ತು ಎಂದು ಹೇಳಿದ್ದಾರೆ. ದೇವರು ಬೇರೆ ವಾಕ್ಯ ಬೇರೆಯೆಂದು ಈ ವಾಕ್ಯದಲ್ಲಿ ತಿಳಿಯುತ್ತಿದೆ. ವಾಕ್ಯ ದೇವರಲ್ಲಿದ್ದರೂ ದೇವರಾಗಿ ಇದ್ದನೆಂದು ಹೇಳಿದ್ದಾರೆ. ವಾಕ್ಯ ದೇವರಾಗಿ ಬದಲಾಗಿದೆಯೆಂದು ಈ ವಾಕ್ಯದ ಮೂಲವಾಗಿ

ತಿಳಿಯುತ್ತಿದೆ. ವಿವರವಾಗಿ ಹೇಳಿದರೇ ವಾಕ್ಯ ಆತ್ಮ ಆದಾಗ, ಆತ್ಮ, ದೇವರು ಆದಾಗ ವಾಕ್ಯವಾದ ಆತ್ಮ, ದೇವರಾಗಿ ಇದ್ದಾನೆಂದು ಹೇಳುವುದಾಗಿದೆ. ದೇವರು ಬೇರೆ ಆತ್ಮ ಬೇರೆ ಆದರೂ ಯಾರು ಆತ್ಮನೋ, ಯಾರು ದೇವರೋ ತಿಳಿಯದೆ ಎಲ್ಲರೂ ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ.

ವಾಸ್ತವವಾಗಿ ಈಗ ಸೃಷ್ಟಿ ನಂತರ ದೇವರು ಇಲ್ಲ. ಪ್ರಪಂಚದಲ್ಲಿ ದೇವರು ಇಲ್ಲವೆಂದು ಹೊರಗೆ ತಿಳಿಯದಂತೆ ಆತ್ಮವೇ ದೇವರ ಸ್ಥಾನವನ್ನು ಭರ್ತಿ ಮಾಡುತ್ತಿದೆ. ಆದ್ದರಿಂದ ಆತ್ಮ, ಜೀವಾತ್ಮನ ಕೆಲಸಗಳನ್ನು ಮಾಡುತ್ತಾ, ಒಂದು ಕಡೆ ಪ್ರಕೃತಿ ಕೆಲಸಗಳನ್ನು ಮಾಡುತ್ತಾ, ಮತ್ತೊಂದು ಕಡೆ ದೇವರ ಹಾಗೆ ತಯಾರಾಗಿ ದೇವರೆನ್ನುವ ಹೆಸರಿನಿಂದ ಇದೆ. ಸೃಷ್ಟಿ ನಂತರ ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನಾಗಿ ಇದ್ದಾನೆ. ನಾಮ, ರೂಪ, ಕ್ರಿಯೆಗಳು ಇಲ್ಲದವನನ್ನು ಏನೂ ಅಲ್ಲದವನು, ಏನೂ ಮಾಡದವನು ಎಂದು ಹೇಳಬಹುದು. ಹಾಗಿರುವವನನ್ನು ಇದ್ದಾನೆನ್ನುವುದಕ್ಕಿಂತ ಇಲ್ಲವೆಂದು ಹೇಳುವುದು ಉತ್ತಮವಾಗುತ್ತದೆ. ದೇವರ ಸ್ಥಾನದಲ್ಲಿ ದೇವರು ಇಲ್ಲದೇ ಹೋದರೇ ಆ ಸ್ಥಾನ ಖಾಲಿಯಾಗಿ ಇರುತ್ತದೆ ಎಂದು ಅನ್ನದಂತೆ ಆತ್ಮ ದೇವರಾಗಿ ಬದಲಾಗಿ ಹೋಗುತ್ತಿದೆ. ಆದ್ದರಿಂದ ಮೇಲೆ ಮೂರನೇ ವಾಕ್ಯದಲ್ಲಿ **"ವಾಕ್ಯ ದೇವರಾಗಿ ಇತ್ತು"** ಎಂದು ಹೇಳಿದ್ದಾರೆ. ಈ ವಾಕ್ಯಗಳನ್ನು ಬಹಳ ಜನ ಕೇಳಿಸಿಕೊಳ್ಳುತ್ತಿದ್ದಾರೆ, ಓದುತ್ತಿದ್ದಾರೆ. ಆದರೂ ಅದರಲ್ಲಿನ ನಿಗೂಢವಾದ ರಹಸ್ಯ ಸರಿಯಾಗಿ ತಿಳಿಯಲಾರರೆಂದೇ ಹೇಳಬಹುದು.

ಇಲ್ಲಿ ದೇವರಾದ ಆತ್ಮ ವಾಸ್ತವವನ್ನು ತಿಳಿಸುವ ನಿಮಿತ್ತ **ವಾಕ್ಯ ದೇವರಾಗಿ ಇತ್ತು** ಎಂದು ಹೇಳುವುದು ನಡೆದಿದೆ. ದೇವರ ಪಾತ್ರವನ್ನು ಪೋಷಿಸುವ ಆತ್ಮ ಯಾವ ಕೆಲಸವನ್ನು ಮಾಡಿದರೂ, ಅತ್ತ ಜೀವಾತ್ಮನ ಮೇಲೆಯೋ ಅಥವಾ ದೇವರೇ ಮಾಡಿದ್ದಾನೆಂದು ದೇವರ ಮೇಲೆಯೋ ಹೇಳುತ್ತಿದೆ. ಅದರಿಂದ ದೇವರು ಇದ್ದಾನೆಂದೇ ಎಲ್ಲರೂ ನಂಬುತ್ತಿದ್ದಾರೆ. ಇಲ್ಲಿ ಕೆಲವರು ದೇವರು ಇಲ್ಲವೆನ್ನುತ್ತೀರಾ, ದೇವರು ಇಲ್ಲದೇ ಹೋದರೇ ಈ ವಿಶ್ವವೆಲ್ಲದಕ್ಕೂ ಯಾರು

ಹಿರಿಯ? ನೀವು ನಿಧಾನವಾಗಿ ದೇವರ ಜ್ಞಾನವನ್ನು ಬೋಧಿಸುತ್ತಾ ಕೊನೆಗೆ ದೇವರೇ ಇಲ್ಲವೆನ್ನುವ ನಾಸ್ತಿಕ ವಾದವನ್ನು ಬೋಧಿಸುತ್ತಿದ್ದೀರ! ಎಂದು ಕೇಳಬಹುದು. ಕೆಲವರಲ್ಲಿ ಉಂಟಾದ ಈ ಪ್ರಶ್ನೆಗೆ ನನ್ನ ಉತ್ತರ ಈ ರೀತಿಯಾಗಿ ಇದೆ. ದೇವರು ದೇವರ ಸ್ಥಾನದಲ್ಲಿ ಇಲ್ಲವೆಂದು ಹೇಳುತ್ತಿದ್ದೇವೇ ಹೊರತು, ದೇವರು ಯಾವಮಾತ್ರವೂ ಇಲ್ಲವೆಂದು ನಾನು ಹೇಳುತ್ತಿಲ್ಲ. ದೇವರು ಏನು ಮಾಡುತ್ತಿದ್ದಾನೋ ತಿಳಿದಿಲ್ಲ. ಆತನು ಕೆಲಸ ಮಾಡುವುದಿಲ್ಲ ಎಂದು ಹೇಳಿದ್ದೇವೆ. ದೇವರಿಗು ಮನುಷ್ಯರಿಗು ಯಾವ ಮಾತ್ರ ಸಂಬಂಧ ಇಲ್ಲ ಎಂದು ಹೇಳಿದ್ದೇವೆ ಹೊರತು, ದೇವರು ಅಸಲಿಗೇ ಇಲ್ಲವೆಂದು ಹೇಳಲಿಲ್ಲ. ದೇವರಿದ್ದಾನೆ ಆತನಿಗೆ ಹೆಸರಿಲ್ಲ, ಕೆಲಸ ಇಲ್ಲ, ಆಕಾರವೂ ಇಲ್ಲ. ಆದ್ದರಿಂದ ಆತನು ಮನುಷ್ಯರೊಂದಿಗೆ ಸಂಬಂಧವೂ ಇಲ್ಲದಂತೆ ಇದ್ದಾನೆ. ಆತನು ಧರ್ಮಗಳಿಗೆ ಮುಪ್ಪು ಉಂಟಾದಾಗ ಮಾತ್ರ ತನ್ನ ಧರ್ಮಗಳನ್ನು ಕಾಪಾಡುವ ನಿಮಿತ್ತ ತನ್ನ ಪ್ರತಿನಿಧಿಯನ್ನು ಕಳುಹಿಸಿ ಕೆಲಸ ಮಾಡಿಸಿ ಧರ್ಮಗಳನ್ನು ಪುನರುದ್ಧರಿಸುವನು. ಆತನು ತನ್ನ ಪ್ರತಿನಿಧಿಯಿಂದ ಕೆಲಸವನ್ನು ಮಾಡಿಸುವನು. ಆಗಲೂ ಕೂಡಾ ನಾನು ದೇವರೆಂದು ಹೇಳಿ ಕೆಲಸ ಮಾಡಲಾರನು. ದೇವರ ಪ್ರತಿನಿಧಿ ದೇವರೊಂದಿಗೆ ಸಮಾನವಾದರೂ ದೇವರೆಂದು ಹೇಳದೆ ಭಗವಂತನೆಂದು ಬದಲಿ ಹೆಸರು ಹೇಳುತ್ತಿದ್ದಾನೆ. ಈತನು ದೇವರೆಂದಾಗಲೀ, ಈತನಿಗೆ ಈ ಲಕ್ಷಣಗಳಿವೆ ಯೆಂದಾಗಲೀ, ದೇವರನ್ನು ಕುರಿತು ಹೀಗಿದ್ದಾನೆಂದು ಅಥವಾ ಹಾಗಿದ್ದಾನೆಂದಾ ಗಲೀ ಹೇಳುವುದಕ್ಕೆ ಅವಕಾಶವಿಲ್ಲದಂತೆ ಇದ್ದಾನೆ. ದೇವರಿದ್ದಾನೆ ಹೇಗಿದ್ದಾನೋ ಯಾರಿಗೂ ತಿಳಿದಿಲ್ಲ. ಸೃಷ್ಟಿ ಆದಿಯಿಂದ ದೇವರನ್ನು ನೋಡಿದವನಾಗಲೀ ದೇವರೊಂದಿಗೆ ಮಾತನಾಡಿದವನಾಗಲೀ ಯಾರೂ ಇಲ್ಲ. ಪ್ರಪಂಚದಲ್ಲಿ ಯಾವುದನ್ನು ಕುರಿತಾದರೂ ಹೇಳಬಹುದು ಆದರೆ, ದೇವರನ್ನು ಕುರಿತು ಯಾರೂ ಹೇಳಲಾರರು. ಆದ್ದರಿಂದ ಕೈಲಾಗದ ಸ್ಥಿತಿಯಲ್ಲಿ ದೇವರು ಅಂತ್ಯ ಇಲ್ಲದವನು, ಹದ್ದು ಇಲ್ಲದವನು ಎಂದು ಅರ್ಥ ಬರುವಂತೆ 'ಅಲ್ಲಾಹ್' ಎಂದು ಕೃತಯುಗದಲ್ಲಿಯೇ ಹೇಳಿದ್ದಾರೆ. ದೇವರು ಎಲ್ಲವನ್ನೂ ಆಡಿಸುವ ಆತ್ಮಗಿಂತ ದೊಡ್ಡದಾಗಿರುವುದರಿಂದ 'ಪರಬ್ರಹ್ಮ' ಎಂದು ಅಂದಿದ್ದಾರೆ. ಆತ್ಮಗಿಂತ

ಬೇರೆಯಾಗಿರುವುದರಿಂದ 'ಪರಮಾತ್ಮ' ಎಂದು ಅಂದಿದ್ದಾರೆ. ಹುಡುಕಿದರೂ ಕಾಣಿಸುವುದಿಲ್ಲ ಆದ್ದರಿಂದ ದೇವಲ್ಪಡುವವನೆಂದು 'ದೇವರೆಂದು' ಅಂದಿದ್ದಾರೆ. ಜೀವಾತ್ಮ, ಆತ್ಮಗಳಿಗಿಂತ ಉತ್ತಮ ಪುರುಷನಾದ್ದರಿಂದ ಆತನನ್ನು **'ಪುರುಷೋತ್ತಮನೆಂದು'** ಅಂದಿದ್ದಾರೆ. ಒಟ್ಟಾರೆ ದೇವರನ್ನು ಕುರಿತು ನಿಮಗೂ ತಿಳಿದಿಲ್ಲ ನನಗೂ ತಿಳಿದಿಲ್ಲವೆಂದು ಒಪ್ಪಿಕೊಳ್ಳುವುದು ಒಳ್ಳೆಯದು.

ಸೃಷ್ಟಿ ನಂತರ ದೇವರು ಸಾಕ್ಷಿಯಾಗಿ ಬದಲಾಗಿದ್ದಾನೆ. ದೇವರು ನೋಡುವವನೇ ಹೊರತು ಮಾಡುವವನಲ್ಲ. ಸೃಷ್ಟಿ ನಂತರ ತಾನು ನೋಡುವವನಾಗಿ ಇರಬೇಕೆಂದುಕೊಂಡ ದೇವರು ತನ್ನ ಸ್ಥಾನದಲ್ಲಿ ಮಾಡುವವನಾಗಿ ಆತ್ಮನನ್ನು ಇರುವಂತೆ, ಆತ್ಮಕ್ಕೆ ದೇವರೇ ಅಧಿಕಾರಕೊಟ್ಟು ನೇಮಿಸಿದ್ದಾನೆ. ಆತ್ಮ ಶರೀರದಲ್ಲಿ ಜೀವಾತ್ಮದೊಂದಿಗೆ ಇರುತ್ತಾ ಜೀವಾತ್ಮ ಮರಣಿಸಿದಾಗ ಅವನನ್ನು ಅದೇ ಕ್ಷಣವೇ ಮತ್ತೊಂದು ಜನ್ಮಕ್ಕೆ ತೆಗೆದುಕೊಂಡು ಹೋಗುತ್ತಿದೆ. ಮತ್ತೊಂದು ಜನ್ಮಕ್ಕೆ ಎಲ್ಲಿಗೆ ತೆಗೆದುಕೊಂಡು ಹೋಗಬೇಕು, ಅಲ್ಲಿ ಆ ಶರೀರದಲ್ಲಿ ಯಾವ್ಯಾವ ಕರ್ಮಗಳು ಅನುಭವಿಸಬೇಕೆಂದು ನಿರ್ಣಯಗಳು ಮರಣಿಸಿದ ಸಮಯದಲ್ಲಿಯೇ ನಿರ್ಣಯಿಸಲ್ಪಡುತ್ತದೆ. ಗತಜನ್ಮದಲ್ಲಿ ಮನುಷ್ಯ ಮಾಡಿಕೊಂಡ ಪಾಪಪುಣ್ಯಗಳನ್ನು ಲೆಕ್ಕಿಸಿ ಅದಕ್ಕೆ ತಕ್ಕ ಜೀವನವಿರುವಂತೆ ಶರೀರದಲ್ಲಿನ ಆತ್ಮವೇ ನಿರ್ಣಯ ಮಾಡುತ್ತಿದೆ. ಆ ನಿರ್ಣಯವನ್ನು **"ತೀರ್ಪು ತೀರಿಸುವುದು"** ಎಂದು ಅನ್ನುತ್ತಿರುತ್ತಾರೆ. ಆ ತೀರ್ಪು ಮರಣಿಸಿದ ಸಮಯದಲ್ಲಿಯೇ ನಡೆಯುತ್ತಿದೆ. ಜೀವಿಯು ಮರಣಿಸುವುದು, ತೀರ್ಪು ತೀರಿಸಲ್ಪಡುವುದು, ನಂತರ ಜನ್ಮಕ್ಕೆ ಹೋಗುವುದು ಎಲ್ಲಾ ಒಂದು ಕ್ಷಣದಲ್ಲಿಯೇ ನಡೆದುಹೋಗುತ್ತಿರುತ್ತದೆ. ಇದೆಲ್ಲಾ ದೇವರು ಮಾಡಬೇಕಾದ ಕೆಲಸವಾದರೂ ದೇವರು ತಾನು ಸ್ಥಬ್ದತೆಯಾಗಿ ಇದ್ದು, ತನ್ನ ಸ್ಥಾನದಲ್ಲಿ ಆತ್ಮನನ್ನು ನೇಮಿಸಿ ಆತ್ಮವೇ ಎಲ್ಲಾ ವಿಧಗಳ ಕೆಲಸವನ್ನು ಮಾಡುವಂತೆ ಅಧಿಕಾರವನ್ನು ಆತ್ಮಕ್ಕೆ ಕೊಟ್ಟಿದ್ದಾನೆ. ಆದ್ದರಿಂದ ಪ್ರತಿ ಮನುಷ್ಯನ ಮರಣದಲ್ಲಿ ಆತ್ಮವೇ ತೀರ್ಪು ತೀರಿಸಿ ಮರುಜನ್ಮಕ್ಕೆ ಕಳಿಹಿಸುತ್ತಿದೆ. ಈ ವಿಷಯವನ್ನು

ಕುರಿತು ಹೊಸ ನಿಬಂಧನೆಯಲ್ಲಿ ಯೋಹಾನ್ ಸುವಾರ್ತೆ, ಐದನೇ ಅಧ್ಯಾಯದಲ್ಲಿ 26, 27 ವಾಕ್ಯಗಳಲ್ಲಿ ಹೇಳಿರುವ ವಿಷಯವನ್ನು ಗಮನಿಸೋಣ.

**(ಯೋಹಾನ್ 5-26,27)** **"ತಂದೆ ಹೇಗೆ ತನ್ನಷ್ಟಕ್ಕೆ ತಾನೇ ಜೀವ ಇರುವವನಾಗಿ ಇದ್ದಾನೋ, ಹಾಗೆಯೇ ಕುಮಾರನು ತನ್ನಷ್ಟಕ್ಕೆ ತಾನೇ ಜೀವ ಇರುವವನಾಗಿ ಇರುವುದಕ್ಕೆ ಕುಮಾರನಿಗೆ ಅಧಿಕಾರ ಅನುಗ್ರಹಿಸಿದನು. ಮತ್ತು ಆತನು ಮನುಷ್ಯ ಕುಮಾರನು ಆದ್ದರಿಂದ ತೀರ್ಪು ತೀರಿಸುವುದಕ್ಕೆ ತಂದೆ ಅಧಿಕಾರ ಅನುಗ್ರಹಿಸಿದೆನು."** (ಈ ವಾಕ್ಯದಲ್ಲಿ ತಂದೆ ಎಂದು ಹೇಳಿದ ಕಡೆ ದೇವರೆಂದು ಅರ್ಥ ಮಾಡಿಕೊಳ್ಳಬೇಕು. ಹಾಗೆಯೇ ಕುಮಾರನು ಎಂದು ಹೇಳಿದ ಕಡೆ ಆತ್ಮಯೆಂದು ಅರ್ಥ ಮಾಡಿಕೊಳ್ಳಬೇಕು.) ತಂದೆಯೆಂದು ದೇವರನ್ನು, ಕುಮಾರನೆಂದು ಆತ್ಮವನ್ನು ಕುರಿತು ಹೇಳಿದ್ದಾರೆ. ದೇವರು ಆತ್ಮಕ್ಕೆ ತನ್ನಹಾಗೇ ಇರುವ ಅಧಿಕಾರವನ್ನು ಕೊಟ್ಟು ತಾನು ಏನೂ ಮಾಡದೆ ಮೌನವಾಗಿ ಇದ್ದಾನೆಂದು ವಾಕ್ಯವನ್ನು ಅನುಸರಿಸಿ ತಿಳಿಯುತ್ತಿದೆ.

ದೇವರು ತನ್ನ ಹಾಗೆ ತನ್ನ ಕುಮಾರನಾದ ಆತ್ಮ ಇರಬೇಕೆಂದು, ತನ್ನನ್ನು (ದೇವರನ್ನು) ಗೌರವಿಸಿದಂತೇ ತನ್ನ ಕುಮಾರನನ್ನು ಸಹ ಎಲ್ಲರೂ ಗೌರವಿಸಬೇಕೆಂದು, ತನ್ನ ಕುಮಾರನಾದ ಆತ್ಮಕ್ಕೆ ಸರ್ವಾಧಿಕಾರವನ್ನು ಒಪ್ಪಿಸಿದ್ದಾನೆ. ಈ ವಿಷಯ ಸತ್ಯವೆಂದು ತಿಳಿಯುವುದಕ್ಕೆ ಯೋಹಾನ್ ಸುವಾರ್ತೆ ಐದನೇ ಅಧ್ಯಾಯದಲ್ಲಿ 22, 23, 24 ವಾಕ್ಯಗಳನ್ನು ಈಗ ನೋಡೋಣ. **(ಯೋಹಾನ್ 5-22, 23, 24)** **"ತಂದೆ ಯಾರಿಗೂ ತೀರ್ಪು ಕೊಡುವುದಿಲ್ಲ ಆದರೆ ತಂದೆಯನ್ನು ಗೌರವಿಸಿದಂತೇ ಎಲ್ಲರೂ ಕುಮಾರನನ್ನು ಗೌರವಿಸಬೇಕೆಂದು ತೀರ್ಪು ಕೊಡುವುದಕ್ಕೆ ಸರ್ವಾಧಿಕಾರವನ್ನು ಕುಮಾರನಿಗೆ ಒಪ್ಪಿಸಿದ್ದಾನೆ. ಕುಮಾರನನ್ನು ಗೌರವಿಸದವನು ಆತನನ್ನು ಕಳುಹಿಸಿದ ತಂದೆಯನ್ನು ಗೌರವಿಸುವುದಿಲ್ಲ. ನನ್ನ ಮಾತು ಕೇಳಿ ನನ್ನನ್ನು ಕಳುಹಿಸಿದವನಲ್ಲಿ ವಿಶ್ವಾಸ ಇರಿಸುವವನು ನಿತ್ಯ ಜೀವ ಇರುವವನು. ಅವನು ತೀರ್ಪಿನೊಳಗೆ ಬಾರದೆ ಮರಣದೊಳಗಿನಿಂದ ಜೀವದೊಳಗೆ ದಾಟಿದ್ದಾನೆಂದು ನಿಮ್ಮೊಂದಿಗೆ ನಿಶ್ಚಯದಿಂದ ಹೇಳುತ್ತಿದ್ದೇನೆ."**

ಈ ವಾಕ್ಯಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವುದಾದರೇ ಪರಮಾತ್ಮ ಎಷ್ಟೋ ಪ್ರೀತಿಯಿಂದ ತನ್ನ ಕುಮಾರನಾದ ಆತ್ಮಕ್ಕೆ ತನ್ನಹಾಗೆ ಗೌರವವಿರುವಂತೆ, ತನ್ನನ್ನು ಪ್ರಜೆಗಳು ಗುರುತಿಸಿದಂತೆ ಆತ್ಮವನ್ನು ಸಹ ಗುರುತಿಸಬೇಕೆಂದು ತನ್ನ ಕೆಲಸವನ್ನು ಮಾಡುವುದಕ್ಕೆ ಆತ್ಮಕ್ಕೆ, ಪರಮಾತ್ಮ ಅಧಿಕಾರವನ್ನು ಕೊಟ್ಟಿದೆ. ಆತ್ಮವನ್ನು ಯಾರಾದರೆ ಗುರುತಿಸುವುದಿಲ್ಲವೋ, ಅವನು ಪರಮಾತ್ಮನಾದ ದೇವರನ್ನು ಸಹ ಗುರುತಿಸದಂತೇಯೆಂದು ತನ್ನ ಕುಮಾರನಾದ ಆತ್ಮವನ್ನು ಗೌರವಿಸದವನು ಆತನ (ಆತ್ಮನ) ತಂದೆಯಾದ ಪರಮಾತ್ಮವನ್ನು ಸಹ ಗೌರವಿಸುವುದಿಲ್ಲ. ಯಾರಾದರೇ ಆತ್ಮವನ್ನು ಕಳುಹಿಸಿದವನಲ್ಲಿ (ದೇವರಲ್ಲಿ) ವಿಶ್ವಾಸ ಇರಿಸುವವನು ಜನನ ಮರಣಗಳಲ್ಲಿ ಇಲ್ಲದೇ ನಿತ್ಯವೂ ಜೀವನವಾದ ದೇವರಲ್ಲಿ ಐಕ್ಯ ಹೊಂದಿದ್ದಾನೆ. ಅಂದರೇ ಮೋಕ್ಷ ಹೊಂದಿದ್ದಾನೆ. ಅಂತಹವನಿಗೆ ಮರಣ ಸ್ಥಿತಿ ಇರುವುದಿಲ್ಲ. ಎರಡನೆಯ ಜನ್ಮ ಕರ್ಮ ತೀರ್ಪು ಇರುವುದಿಲ್ಲ. ಅವನು ಮೋಕ್ಷದೊಳಗೆ ಹೋಗಿದ್ದಾನೆಂದು ಹೇಳಿದ್ದಾರೆ. ಈ ಭಾವನೆಯನ್ನೆಲ್ಲಾ ನೋಡಿದ ನಂತರ ಹೀಗೆ ಅರ್ಥವಾಗುತ್ತಿದೆ. ದೇವರು ತನ್ನ ಸ್ಥಾನದಲ್ಲಿ ಇಲ್ಲದಂತೆ, ಸೃಷ್ಟಿ ಕರ್ತನಾಗಿ ಅಲ್ಲದೇ, ಯಾವ ಕಾರ್ಯಕ್ಕೂ ಕರ್ತನಾಗಿ ಇಲ್ಲದೇ ಹೋಗಿದ್ದಾನೆ. ತನ್ನ ಸ್ಥಾನದಲ್ಲಿ ತನ್ನ ಕುಮಾರನಾದ ಆತ್ಮವನ್ನು ನೇಮಿಸಿ ತಾನು ಮಾಡುವ ಕೆಲಸಗಳನ್ನು ಪೂರ್ತಿಯಾಗಿ ಆತ್ಮಕ್ಕೇ ಒಪ್ಪಿಸಿದ್ದಾನೆ. ಆತ್ಮವನ್ನು ತಿಳಿದರೆ, ಆತ್ಮ ಹೇಳುವುದೇನೆಂದರೇ! ತನ್ನನ್ನು ಕಳುಹಿಸಿದ ದೇವರಲ್ಲಿ ವಿಶ್ವಾಸವಿರಿಸುವವನು ಮರಣಗಳಿಂದ ವಿಮುಕ್ತಿ ಹೊಂದಿ ಮೋಕ್ಷವನ್ನು ಹೊಂದುವನೆಂದು ಹೇಳಿದ್ದಾನೆ.

ದೇವರೇನೋ ಒಂದು ಕಡೆ ತನ್ನ ಕುಮಾರನಾದ ಆತ್ಮವನ್ನು ಗೌರವಿಸಿದರೇ, ವಿಶ್ವಾಸಿಸಿದರೆ ನನ್ನನ್ನು ವಿಶ್ವಾಸಿಸಿದಂತೆ, ನನ್ನನ್ನು ಗೌರವಿಸಿದಂತೇ ಎಂದು ಹೇಳುತ್ತಿದ್ದಾನೆ. ಅದೇ ರೀತಿಯಾಗಿ ಕುಮಾರನಾದ ಆತ್ಮ ತನ್ನನ್ನು ಕಳುಹಿಸಿದ ದೇವರನ್ನು ವಿಶ್ವಾಸಿಸಿದರೆ ನಿಮಗೆ ಮೋಕ್ಷ ಲಭಿಸಿದಂತೇ ಎನ್ನುತ್ತಿದ್ದಾನೆ. ಒಬ್ಬರ ಮೇಲೆ ಮತ್ತೊಬ್ಬರು ಎಷ್ಟು ಪ್ರೀತಿಯಿಂದ ಹೇಳಿಕೊಂಡಂತೆ

ಇದೆ. ನಾನು ಮೊದಲೇ ಹೇಳಿದ್ದೇನೆ. ಆತ್ಮ ಎಲ್ಲಾ ಮಾಡುತ್ತಿದ್ದರೂ ಎಲ್ಲಾ ದೇವರ ಮೇಲೆಯೇ ಹೇಳುತ್ತಿದೆ. ಆತ್ಮ ತನ್ನ ತಂದೆಯಾದ ದೇವರಿಗೆ ಗೌರವದಕ್ಕಬೇಕೆಂದು ತನ್ನನ್ನು ಕುರಿತು ಎಲ್ಲಿಯೂ ಹೇಳಿಕೊಳ್ಳದೇ ಮಾಡದ ದೇವರನ್ನು ಕುರಿತು ಮಾಡಿದ್ದಾನೆಂದು ಹೇಳುತ್ತಿದೆ. ದೇವರು ತನ್ನ ಕುಮಾರನಾದ ಆತ್ಮಕ್ಕೆ ತನ್ನ ಹಾಗೆ ಗೌರವ ಸಿಗಬೇಕೆಂದು ಆತ್ಮನಿಂದಲೇ ಎಲ್ಲಾ ಕಾರ್ಯಗಳನ್ನು ಮಾಡಿಸುತ್ತಿದೆ. ಮರಣದಲ್ಲಿ ಮನುಷ್ಯನನ್ನು ಕರ್ಮ ಪ್ರಕಾರ ಜನ್ಮವನ್ನು ನಿರ್ಣಯಿಸಿ (ತೀರ್ಪನ್ನು ಕೊಟ್ಟು) ಎರಡನೆಯ ಜನ್ಮಕ್ಕೆ ಕಳುಹಿಸುವಂತೆ ಆತ್ಮನಿಂದಲೇ ಮಾಡಿಸುತ್ತಿದೆ. ಆತ್ಮ ದೇವರಹಾಗೆ ನಿತ್ಯ ಜೀವ ಹೊಂದಿ ಮರಣಿಸಿದ ಜೀವಾತ್ಮಗಳನ್ನು ಪುನಃ ಜನ್ಮಗಳಿಗೆ ಕಳುಹಿಸುತ್ತಿದೆ. ಕುಮಾರನಾದ ಆತ್ಮಕ್ಕೆ ಜೀವಾತ್ಮರಾದ ಮೊಮ್ಮಕ್ಕಳನ್ನು ಜನ್ಮಗಳಿಗೆ ಕಳುಹಿಸುವಹಾಗೆ, ಅವರ ಕರ್ಮಾನುಸಾರ ನಡೆಸುವಂತೆ ಗತ ಜನ್ಮಗಳ ಕರ್ಮಗಳನ್ನು ಎರಡನೆಯ ಜನ್ಮಕ್ಕೆ ನಿರ್ಣಯಿಸಿ ಕಳುಹಿಸುವುದಕ್ಕೆ ಆತ್ಮಕ್ಕೆ ಅಧಿಕಾರವನ್ನು ದೇವರು ಕೊಟ್ಟು, ನಂತರ ದೇವರು ವಿಶ್ರಾಂತಿಯಾಗಿ ಸ್ತಬ್ದತೆಯಾಗಿ ಉಳಿದುಹೋಗಿದ್ದಾನೆ. ಧರ್ಮಗಳಿಗೆ ಮುಪ್ಪು ಉಂಟಾದಾಗ ಮಾತ್ರ ಧರ್ಮಗಳನ್ನು ಪುನರುದ್ಧರಿಸುವುದಕ್ಕೆ ದೇವರು ಮನುಷ್ಯನ ರೂಪದಲ್ಲಿ ಮಾರುವೇಷದಲ್ಲಿ ಬಂದು ತನ್ನ ಧರ್ಮಗಳನ್ನು ನೆಲೆಗೊಳಿಸಿ ಹೋಗುತ್ತಿದ್ದಾನೆ. ಆಗಲೂ ಸಹ ದೇವರಾಗಿ ಕೆಲಸಮಾಡದಂತೆ ಮಾರುವೇಷವಾದ ಭಗವಂತನಾಗಿ ಕೆಲಸವನ್ನು ಮಾಡುತ್ತಿದ್ದಾನೆ. ಮನುಷ್ಯ ಧರ್ಮಗಳನ್ನು ಸ್ಥಾಪಿಸಲಾರನು. ಹಾಗೆಯೇ ದೇವರು ಧರ್ಮಗಳನ್ನು ಸ್ಥಾಪಿಸಲಿಲ್ಲ. ಮನುಷ್ಯನಾಗಲೀ, ದೇವರಾಗಲೀ ಮನುಷ್ಯನಿಗೂ ದೇವರಿಗೂ ಮಧ್ಯದಲ್ಲಿ ಭಗವಂತನ ಪಾತ್ರದಲ್ಲಿ ಧರ್ಮಗಳನ್ನು ಪುನರುದ್ಧರಿಸುವುದು ನಡೆಯುತ್ತಿದೆ. ಆದರೇ ಭಗವಂತನು ಭೂಮಿಮೇಲೆ ಬಂದಾಗ ಆತನನ್ನು ಯಾರೂ ಗುರುತಿಸಲಾರರು.

ದೇವರು, ಆತ್ಮ ಇಬ್ಬರೇ ಲೋಕದಲ್ಲಿ ಆರಾಧಿಸಲು ಅರ್ಹರಾಗಿದ್ದಾರೆ. ದೇವರು ತಾನು ಆತ್ಮಕ್ಕೆ ಕೆಲವನ್ನು ಒಪ್ಪಿಸಿ ಮೌನವಾಗಿ ಇದ್ದರೂ, ಆತ್ಮನನ್ನೇ

ಆರಾಧಿಸೆಂದು, ಗೌರವಿಸೆಂದು ದೇವರು ಹೇಳಿದ್ದರೂ, ಆ ವಿಷಯವೇ ಅರ್ಥ ವಾಗದವರು ಬಹಳ ಜನ ಇದ್ದಾರೆ. ಬ್ರಹ್ಮವಿದ್ಯಾ ಶಾಸ್ತ್ರವಾದ ಪ್ರಥಮದೈವಗ್ರಂಥದಲ್ಲಿ ದೇವರ ಆರಾಧನೆಗಳು ಮೂರು ವಿಧಗಳಾಗಿ ಹೇಳಲ್ಪಟ್ಟಿವೆ. ಅಲ್ಲಿ ಹೇಳಿರುವ ಮೂರು ಆರಾಧನೆಗಳು ಮೂರು ಯೋಗಗಳೆಂದು ಹೇಳಿದ್ದಾರೆ. ಅದರಲ್ಲಿ ಎರಡು ಯೋಗಗಳು ಆತ್ಮವನ್ನು ಆರಾಧಿಸುವವಾಗಿ ಇವೆ. ಹಾಗೇ ಒಂದು ಯೋಗ ನೇರವಾಗಿ ದೇವರನ್ನು ಆರಾಧಿಸುವುದಾಗಿ ಇದೆ. ಕರ್ಮಯೋಗ, ಬ್ರಹ್ಮಯೋಗ ಎನ್ನುವ ಎರಡು ಯೋಗಗಳಿಂದ ಆತ್ಮ ಆರಾಧಿಸಲ್ಪಡುತ್ತಿದೆ. ಭಕ್ತಿಯೋಗ ಎನ್ನುವ ಮೂರನೇ ವಿಧಾನದಿಂದ ನೇರವಾಗಿ ದೇವರನ್ನೇ ಆರಾಧಿಸಿದಂತಾಗುತ್ತಿದೆ. ಯಾರಾದರೆ ಭಕ್ತಿಯೋಗದಿಂದ ದೇವರನ್ನು ಆರಾಧಿಸುತ್ತಿದ್ದಾರೋ ಅವರು ನೇರವಾಗಿ ದೇವರ ಸನ್ನಿಧಿಗೆ ಸೇರಿಕೊಳ್ಳುತ್ತಿದ್ದಾರೆ.

ಮನುಷ್ಯರು ಸಾಯುತ್ತಾ ಹುಟ್ಟುತ್ತಿರುವಾಗ, ಅಂದರೇ ಈಗ ನಾವಿರುವ ಪರಿಸ್ಥಿತಿಯಲ್ಲಿ ಇರುವಾಗ ನಮ್ಮೆಲ್ಲರನ್ನೂ ಮೃತುಗಳೆಂದು ಹೇಳಬಹುದು. ಮೃತರೆಂದರೇ ಮರಣ ಇರುವವರೆಂದು ಅರ್ಥ. ಈದಿನ ಲೋಕದಲ್ಲಿ ಇರುವವರೆಲ್ಲರೂ ಮೃತರಾಗಿಯೇ ಇದ್ದಾರೆ. ಜನನ ಮರಣ ಸ್ಥಿತಿ ಇರುವವರೆಲ್ಲರನ್ನೂ ಮೃತರೆಂದು ಅನ್ನಬಹುದು. ನಿತ್ಯ ಜೀವ ಎಂದರೆ ಮೋಕ್ಷ. ಆರಾಧನೆಗಳಲ್ಲಿ ಮೂರನೆಯದಾದ **ಭಕ್ತಿಯೋಗದಿಂದ ಮನುಷ್ಯ ಬೇಗನೇ ಮೃತಿಗಳಿಂದ ಹೊರಬಿದ್ದು ಜೀವನದೊಳಗೆ ಪ್ರವೇಶಿಸುವನು.** ಜೀವನ, ನಿತ್ಯ ಜೀವನ ಎಂದರೆ ಮೋಕ್ಷ ಹೊಂದುವುದು ಅಥವಾ ದೇವರೊಳಗೆ ಐಕ್ಯವಾಗಿ ಹೋಗುವುದನ್ನು ನಿತ್ಯ ಜೀವನವನ್ನು ಹೊಂದುವುದು ಎಂದು ಅನ್ನುತ್ತಾರೆ. ಈ ವಿಷಯವಾಗಿ ಬೈಬಲ್ ಗ್ರಂಥ ಯೋಹಾನ್ ಸುವಾರ್ತೆ ಐದನೇ ಅಧ್ಯಾಯದಲ್ಲಿ 21ನೇ ವಾಕ್ಯವನ್ನು ನೋಡಿದರೇ ತಿಳಿಯುತ್ತದೆ. (**ಯೋಹಾನ್ 5-21**) **"ತಂದೆ ಮೃತರನ್ನು ಹೇಗೆ ಎಬ್ಬಿಸಿ ಬದುಕಿಸುತ್ತಾನೋ ಹಾಗೆಯೇ ಕುಮಾರನು ತನ್ನ ಇಷ್ಟ ಬಂದವರನ್ನು ಬದುಕಿಸುತ್ತಾನೆ."**

ಈ ವಾಕ್ಯ ಕ್ರೈಸ್ತವ ಲೋಕಕ್ಕೆ ಒಟ್ಟಾರೆ ಅರ್ಥವಾಗಿರುವುದಿಲ್ಲವೆಂದು ಅಂದುಕೊಳ್ಳುತ್ತೇನೆ. ಭಕ್ತಿಯೋಗವನ್ನು ಅನುಸರಿಸಿದವರನ್ನು ದೇವರು ಜನ್ಮಗಳು ಇಲ್ಲದಂತೆ ಮಾಡಿ ಮೋಕ್ಷವನ್ನು ಹೊಂದುವಂತೆ ಮಾಡುವನು. ಜನ್ಮಗಳು ಇಲ್ಲದಂತೆ ಮಾಡಿದಾಗ ಮರಣ ಇಲ್ಲ ಅಲ್ಲವೆ! ಜನ್ಮ ಇದ್ದರೇ ಮರಣವಿರುತ್ತದೆ. ಮರಣ ಹೊಂದಿ ಪುನಃ ಜನ್ಮಿಸುವವನು ಪುನಃ ಮರಣವನ್ನು ಹೊಂದ ಬೇಕಾಗಿದ್ದೇ. ಆದ್ದರಿಂದ ಅಂತಹವನನ್ನು ಸಾಯುವವನೆಂದು, ಮೃತ ಇರುವವನೆಂದು, ಮೃತನೆಂದು ಹೇಳಬಹುದು. ಆದ್ದರಿಂದ ಮನುಷ್ಯರನ್ನು ದೇವರು ಮೃತರೆಂದು ಹೇಳಿದ್ದಾನೆ. ಯಾವಾಗಾದರೇ ಮನುಷ್ಯ ಮೋಕ್ಷವನ್ನು ಹೊಂದುವನೋ ಆಗ ಅಮೃತನಾಗಿ ಹೋಗುತ್ತಾನೆ. ಪುನಃ ಸಾಯುವುದು ಇಲ್ಲ, ಹುಟ್ಟುವುದು ಇಲ್ಲ. ಭಕ್ತಿಯೋಗದಿಂದ ಮುಕ್ತಿ ಹೊಂದಬಹುದು. ಭಕ್ತಿಯೋಗದಿಂದ ದೇವರೇ ಮನುಷ್ಯನಿಗೆ ಮುಕ್ತಿಯನ್ನು ಉಂಟುಮಾಡುತ್ತಾನೆ. ಇಲ್ಲಿಯೂ ಸಹ ಆತನು (ದೇವರು) ಯಾವ ಮಾತ್ರವೂ ಕೆಲಸವನ್ನು ಮಾಡದೇ ಭಕ್ತಿಯೋಗವನ್ನು ಅನುಸರಿಸಿದವನು ಮುಕ್ತಿ ಹೊಂದುವಂತೆ ಮಾಡುತ್ತಿದ್ದಾನೆ. ದೇವರು ಭಕ್ತಿಯೋಗವನ್ನು ಅನುಸರಿಸಿದವರನ್ನು ಮೃತ್ಯುವಿನಿಂದ ಹೇಗೆ ಕಾಪಾಡಿ ಬದುಕಿಸುತ್ತಾನೋ ಎಂದರೆ, ಬದುಕಿಸುವುದು ಎಂದಾಗ ಮೋಕ್ಷವನ್ನು ಉಂಟುಮಾಡುವುದೆಂದು ಅರ್ಥಮಾಡಿಕೊಳ್ಳಬೇಕು. ವಾಕ್ಯದಲ್ಲಿ **"ತಂದೆ ಮೃತರನ್ನು ಹೇಗೆ ಎಬ್ಬಿಸಿ ಬದುಕಿಸುತ್ತಾನೋ"** ಎಂದು ಇರುವುದನ್ನು ಮನುಷ್ಯನನ್ನು ಸಾವಿನಿಂದ ತಪ್ಪಿಸಿ ನಿತ್ಯ ಜೀವನ (ಬದುಕಿನೊಳಗೆ) ದೊಳಗೆ ಸೇರಿಸುತ್ತಿದ್ದಾನೆಂದು ಅರ್ಥಮಾಡಿಕೊಳ್ಳಬೇಕಾಗಿರುತ್ತದೆ.

"ತಂದೆ ಮೃತರನ್ನು ಹೇಗೆ ಎಬ್ಬಿಸಿ ಬದುಕಿಸುತ್ತಾನೋ ಹಾಗೆಯೇ ಕುಮಾರನಾದ ಆತ್ಮ ತನ್ನ ಇಷ್ಟ ಬಂದವರನ್ನು ಬದುಕಿಸುತ್ತದೆ." ಎಂದು ವಾಕ್ಯದಲ್ಲಿ ಇದೆ. ಆರಾಧನೆಗಳಲ್ಲಿ ಕರ್ಮಯೋಗ, ಬ್ರಹ್ಮಯೋಗ ಎನ್ನುವ ಎರಡು ಯೋಗಗಳನ್ನು ಆಚರಿಸಿದವನ ಕರ್ಮಗಳು ಯಾವಾಗ ಇಲ್ಲದಂತೆ ಹೋಗುತ್ತವೋ, ಆಗ ಅವರಿಗೆ ದೇವರೊಂದಿಗೆ ಸಂಬಂಧವಿಲ್ಲದಂತೆ ಆತ್ಮವೇ

ಮೋಕ್ಷವನ್ನು ಉಂಟುಮಾಡುತ್ತದೆ. ಆತ್ಮವೇ ಸ್ವತಃವಾಗಿ ಮೋಕ್ಷವನ್ನು ಉಂಟುಮಾಡುವ ಅಧಿಕಾರ ದೇವರು ಆತ್ಮಕ್ಕೆ ಕೊಟ್ಟಿದ್ದಾನೆ. ಆದ್ದರಿಂದ ತಂದೆ ಭಕ್ತಿಯೋಗ ಆಚರಿಸಿದವರಿಗೆ ಮೋಕ್ಷವನ್ನುಂಟುಮಾಡುವಂತೆ ಕರ್ಮ, ಬ್ರಹ್ಮ, ಯೋಗಗಳನ್ನು ಆಚರಿಸಿದವರಿಗೆ ಆತ್ಮ ಮೃತರಿಂದ ಹೊರಗೆ ತೆಗೆದು ಬದುಕಿಸುತ್ತಿದೆ. (ಜೀವನವನ್ನು ಕೊಡುತ್ತಿದೆ.) ಆದ್ದರಿಂದ "ತಂದೆ ಹೇಗೆ ಮೃತರನ್ನು ಎಬ್ಬಿಸಿ ಬದುಕಿಸುತ್ತಾನೋ ಕುಮಾರನು ಸಹ ತನಗೆ ಇಷ್ಟವಾದವರನ್ನು ಬದುಕಿಸುತ್ತಾನೆ ಎಂದು ಇದೆ.

ಶರೀರದಲ್ಲಿ ಜೀವಾತ್ಮದೊಂದಿಗೆ ಇರುವ ಆತ್ಮವನ್ನು ಇನ್ನೂ ಚೆನ್ನಾಗಿ ಅರ್ಥಮಾಡಿಕೊಳ್ಳುವುದಕ್ಕೆ ದೇವರು ಎಷ್ಟೋ ವಾಕ್ಯಗಳನ್ನು ಹೇಳಿದ್ದಾನೆ. ಮುಖ್ಯವಾಗಿ ದೇವರು ಎಂದರೆ ಜೀವಾತ್ಮಗೆ ಭಿನ್ನವಾಗಿ ಇರುವವನು. ಜೀವಾತ್ಮ ಸಾವುಹುಟ್ಟುಗಳನ್ನು ಹೊಂದುತ್ತಿರುವಾಗ, ದೇವರು ಸಾವುಹುಟ್ಟುಗಳು ಇಲ್ಲದವನಾಗಿ ಇದ್ದಾನೆ. ಜೀವಾತ್ಮ ಕೆಲಸವನ್ನು ಮಾಡಿ ಕರ್ಮವನ್ನು ಅನುಭವಿಸುತ್ತಿರುವಾಗ, ದೇವರು ಯಾವ ಕೆಲಸವನ್ನು ಮಾಡದವನಾಗಿ ಯಾವ ಅನುಭವ ಇಲ್ಲದವನಾಗಿ ಇದ್ದಾನೆ. ಜೀವಾತ್ಮ ಮೃತನಾಗಿರುವಾಗ, ದೇವರು ಅಮೃತನಾಗಿ ಇದ್ದಾನೆ. ಅಮೃತನು ಎಂದರೇ ಸಾವು ಇಲ್ಲದವನು. ಯಾವಾಗಲೂ ನಿತ್ಯ ಜೀವನದಲ್ಲಿ ಇರುವವನೆಂದು ಅರ್ಥ. ದೇವರು ಯಾವಾಗಲೂ ಮುಕ್ತಿಯಲ್ಲೇ ಇದ್ದಾನೆಂದು ಹೇಳಬಹುದು. ದೇವರು ಆದಿಯಿಂದ ತನ್ನಷ್ಟಕ್ಕೆ ತಾನೇ ಸಾವು ಹುಟ್ಟುಗಳು ಇಲ್ಲದವನಾಗಿ ನಿತ್ಯ ಜೀವ ಇರುವವನಾಗಿ ಇದ್ದಾನೆ. ಹಾಗೆಯೇ ಕುಮಾರನಾದ ಆತ್ಮ ದೇವರಹಾಗೆ ತನ್ನಷ್ಟಕ್ಕೆ ತಾನು ಜೀವ ಇರುವುದಾಗಿ ಇದೆ. ಆತ್ಮಕ್ಕು ಸಹ ಜನನ ಮರಣಗಳು ಇಲ್ಲ. ದೇವರು ನಿತ್ಯ ಜೀವನ ಇರುವವನಾಗಿರುವಂತೆ ಆತ್ಮವೂ ಸಹ ನಿತ್ಯ ಜೀವನವಿರುವುದಾಗಿ ಮರಣ ಇಲ್ಲದ್ದಾಗಿ ಇದೆ. ಈ ವಿಷಯವನ್ನು ತಿಳಿಸುವ ನಿಮಿತ್ತ ಯೋಹಾನ ಸುವಾರ್ತೆ ಐದನೇ ಅಧ್ಯಾಯ 26ನೇ ವಚನದಲ್ಲಿ ಈ ವಿಧವಾಗಿ ಇದೆ ನೋಡಿರಿ.

**(5-26) "ತಂದೆ ಹೇಗೆ ತನ್ನಷ್ಟಕ್ಕೆ ತಾನೇ ಜೀವವಿರುವವನಾಗಿ ಇದ್ದಾನೋ, ಹಾಗೆಯೇ ಕುಮಾರನು ತನ್ನಷ್ಟಕ್ಕೆ ತಾನೇ ಜೀವ ಇರುವವನಾಗಿ ಇರುವುದಕ್ಕೆ ಕುಮಾರನಿಗೆ ಅಧಿಕಾರವನ್ನು ಅನುಗ್ರಹಿಸಿದ್ದೇನೆ."**

ಇದೆಲ್ಲಾ ನೋಡಿದ ನಂತರ ಶರೀರದಲ್ಲಿನ ಆತ್ಮಕ್ಕೆ ದೇವರು ಅಧಿಕಾರವನ್ನು ಕೊಟ್ಟು ತನ್ನಂತೆ ತನ್ನ ಕುಮಾರನಾದ ಆತ್ಮವನ್ನು ತಯಾರಿಸಿ ಅಧಿಕಾರ ಕೊಟ್ಟಿದ್ದಾನೆಂದು ತಿಳಿಯುತ್ತಿದೆ. ಅದರಿಂದ ಆತ್ಮ ದೇವರಹಾಗೆ ನಿತ್ಯ ಜೀವ ಇರುವಂತದ್ದಾಗಿ ಇರುವುದೇ ಅಲ್ಲದೇ, ಜೀವಾತ್ಮನ ಮರಣದಲ್ಲಿ ತೀರ್ಪು ಕೊಡುವುದಾಗಿ ಇದೆ. ಕರ್ಮ ಪ್ರಕಾರ ಜೀವಾತ್ಮ ಜೀವನವನ್ನು ಕಳೆಯುವಹಾಗೆ, ಆತ್ಮವೇ ಎಲ್ಲ ಕೆಲಸಗಳು ಮಾಡಿ ಜೀವಿಯನ್ನು ಕರ್ಮವನ್ನು ಅನುಭವಿಸುವಂತೆ ಮಾಡುತ್ತಿದೆ. ದೇವರಿದ್ದರೂ ಇಲ್ಲದಂತಾಗಿ, ಚಲನೆ ವಲನೆಇಲ್ಲದೆ ಏನೂ ಮಾಡದೆ ಸ್ಥಬ್ದತೆಯಾಗಿದ್ದು, ತನ್ನ ಕಾರ್ಯಗಳೆಲ್ಲವನ್ನೂ ಈಡೇರಿಸುವುದಕ್ಕೆ ಆತ್ಮಕ್ಕೆ ಅಧಿಕಾರಕೊಟ್ಟು ತನ್ನಂತವನನ್ನಾಗಿ ಅತ್ಮವನ್ನು ಮಾಡಿದ್ದಾನೆ. ತಂದೆಯಾದ ದೇವರು ನೇಮಿಸಿದಂತೆ ಆತ್ಮ ಕೆಲಸ ಮಾಡುತ್ತಾ ಹೊರಗೆ ದೇವರು ಮಾಡಿದಂತೇ ಹೇಳುತ್ತಿದೆ. ಆತ್ಮಜ್ಞಾನ ಚೆನ್ನಾಗಿ ತಿಳಿದರೇನೆ ದೇವರು ಮಾಡುವವನಲ್ಲ, ಆತ್ಮ ಮಾಡುತ್ತಿದೆಯೆಂದು ತಿಳಿಯುತ್ತದೆ. ಆತ್ಮಜ್ಞಾನ ತಿಳಿಯದವರಿಗೆ ದೇವರೇ ಎಲ್ಲ ಕೆಲಸಗಳು ಮಾಡಿದಂತಿರುತ್ತದೆ. ತಂದೆಯಾದ ದೇವರು ತನ್ನ ಕುಮಾರನಾದ ಆತ್ಮಕ್ಕೆ ತನ್ನಹಾಗೆ ಸ್ಥಾನ, ಗೌರವವಾಗಿ ಇರಬೇಕೆಂದು ನಿತ್ಯ ಜೀವನವನ್ನು, ತೀರ್ಪು ತೀರಿಸುವ ಅಧಿಕಾರವನ್ನು ಆತ್ಮಕ್ಕೆ ಕೊಟ್ಟಿದ್ದಾನೆ. ಆತ್ಮ ಆದಿಯಲ್ಲೇ ದೇವರಿಂದ ಸೃಷ್ಟಿಸಲ್ಪಟ್ಟಿದೆ. ಆತ್ಮ ಆದಿಯಲ್ಲೇ ಇದೆ. ಆತ್ಮ ದೇವರಹತ್ತಿರ ಇದೆ. ದೇವರುಕೊಟ್ಟಿರುವ ಅಧಿಕಾರದಿಂದ ಆತ್ಮ ದೇವರಾಗಿದೆ. ಆತ್ಮವನ್ನು ವಾಕ್ಯವಾಗಿ ಹೇಳುತ್ತಾ ಯೋಹಾನ ಸುವಾರ್ತೆ ಮೊದಲ ವಾಕ್ಯದಲ್ಲಿ **ಆದಿಯಲ್ಲಿ ವಾಕ್ಯವಿತ್ತು** ಎಂದು ಹೇಳಿದ್ದಾರೆ. ಎರಡನೆ ಮಾತಾಗಿ **ವಾಕ್ಯ ದೇವರಹತ್ತಿರ ಇತ್ತು** ಎಂದು ಹೇಳಿದ್ದಾರೆ. ಮೂರನೇ ವಾಕ್ಯವಾಗಿ **ವಾಕ್ಯ ದೇವರಾಗಿ ಇತ್ತು** ಎಂದು ಹೇಳಿದ್ದಾರೆ.

ಅದಕ್ಕೆ ಉಪಮಾನವಾಗಿ ಗೂಡಿನಲ್ಲಿ ದಾರವಿತ್ತು, ದಾರ ಹತ್ತಿಬಳಿ ಇತ್ತು, ದಾರ ಹತ್ತಿಯಾಗಿ ಇತ್ತು. ದೇವರು ಹೇಳಿದ ವಾಕ್ಯ, ದೇವರು ಎನ್ನುವ ಮಾತುಗಳಿಗೆ ಸಮಾನವಾಗಿ ದಾರ, ಹತ್ತಿ ಸರಿಹೋಗುತ್ತಿದೆ. ದಾರವು ಹತ್ತಿಯೇ, ದಾರ ಹತ್ತಿ ಬಳಯಿಂದಲೇ ಬರುತ್ತಿದೆ. ಈ ವಿಷಯ ಅರ್ಥವಾದರೇ ಆತ್ಮವೊಂದರ ಜ್ಞಾನ ಅರ್ಥವಾಗುತ್ತದೆ. ಇಲ್ಲಿಯವರೆಗು ಇಂಜೀಲ್ ಗ್ರಂಥದಲ್ಲಿ ಹೇಳಿದ ಮೂರು ಪ್ರಥಮ ವಾಕ್ಯಗಳ ವಿವರ ತಿಳಿದುಕೊಂಡಿದ್ದೇವೆ. ಇನ್ನೂ ಕೊನೆಯದಾಗಿ ಅಂತಿಮ ದೈವಗ್ರಂಥವೊಂದರ ಮೂರು ಪ್ರಥಮ ವಾಕ್ಯಗಳನ್ನು ನೋಡೋಣ.

**ಪ್ರಶ್ನೆ :- ಚಿಕ್ಕ ಸಂಶಯ ದೇವರು ಯಾವ ಕೆಲಸವನ್ನು ಮಾಡುವುದಿಲ್ಲ ಸರಿ ಒಪ್ಪಿಕೊಳ್ಳುತ್ತೇವೆ. ಕೊನೆಯಲ್ಲಿ ಧರ್ಮಗಳನ್ನು ನೆಲೆಗೊಳಿಸಲು ಭಗವಂತನಾಗಿ ದೇವರೇ ಬಂದು ತನ್ನ ಧರ್ಮಗಳನ್ನು ಪ್ರತಿಷ್ಠಿಸುವನು ಎಂದು ಇದೆ ಅಲ್ಲವೆ! ಆಗ ಧರ್ಮಪ್ರತಿಷ್ಠಾಪನೆ ಕೆಲಸ ಮಾಡಿದಂತಲ್ಲವೇ! ದೇವರು ಕೆಲಸ ಮಾಡುವುದಿಲ್ಲ ಎನ್ನುವುದಕ್ಕೆ ಸರಿಹೋಗುವುದಿಲ್ಲ ಅಲ್ಲವೇ! ದೇವರು ಸಹ ಒಂದು ಸಮಯದಲ್ಲಿ ಕೆಲಸ ಮಾಡುವನೆಂದೇ ತಿಳಿಯುತ್ತಿದೆ. ಇದಕ್ಕೆ ನೀವೇನು ಹೇಳುತ್ತೀರ?**

**ಉತ್ತರ :-** ದೇವರು ಕೆಲಸ ಮಾಡುವುದಿಲ್ಲ ಎನ್ನುವುದು ಶಾಸನ. ಶಾಸ್ತ್ರಬದ್ಧವಾದುದನ್ನು ಶಾಸನ ಎಂದು ಕರೆಯುತ್ತೇವೆ. ಶಾಸನ ಎಂದರೆ ಶಾಪದಹಾಗೆ ನಡೆದುತೀರುತ್ತದೆ. ದೇವರು ಒಂದುಬಾರಿಯಾಗಲೀ, ಯಾವಾಗಾಗಲೀ ಸೃಷ್ಟಿ ನಂತರ ಕೆಲಸ ಮಾಡಲಿಲ್ಲ. ದೇವರು ಸ್ವತಃವಾಗಿ ಭಗವಂತನಾಗಿ ಬಂದರೇ ವಿಶ್ವವೆಲ್ಲಾ ಅಣುಅಣುವಿನಲ್ಲೂ ಇರುವ ದೇವರು ಖಾಲಿಯಾಗಿ ಒಬ್ಬ ಭಗವಂತನಲ್ಲಿ ಮಾತ್ರ ತುಂಬಿಕೊಂಡಿದ್ದಾನೆಂದು ಹೇಳಬೇಕಾಗಿ ಬರುತ್ತದೆ. ಹಾಗೆ ಎಂದೂ ನಡೆಯಲಿಲ್ಲ. ಎಲ್ಲಾ ಕಡೆ ವ್ಯಾಪಿಸಿರುವ ದೇವರು ಎಂದಿಗೂ ಹಾಗೇ ಇರುತ್ತಾನೆ. ಆತನು ತನ್ನ ಧರ್ಮಗಳನ್ನು ನೆಲೆಗೊಳಿಸಬೇಕಾಗಿ ಬಂದರೇ ಮಾನವನಾಗಿ ಅವತರಿಸುತ್ತೇನೆಂದು ಭಗವದ್ಗೀತೆಯಲ್ಲಿ ಜ್ಞಾನಯೋಗ ವೆನ್ನುವ ಅಧ್ಯಾಯದಲ್ಲಿ 7,8 ಶ್ಲೋಕಗಳಲ್ಲಿ ಹೇಳಿದ್ದಾನೆ.

**ಶ್ಲೋ॥ 7.** **ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥**

**ಶ್ಲೋ॥ 8.** **ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥**

**ಭಾವಾರ್ಥಗಳು :– "ಭೂಮಿಮೇಲೆ ಯಾವಾಗ ಧರ್ಮಗಳಿಗೆ ಮುಪ್ಪು(ಹಾನಿ) ಉಂಟಾಗಿ ಅಧರ್ಮಗಳು ವೃದ್ಧಿ ಹೊಂದುತ್ತವೋ ಆಗ ನಾನು ಅವತರಿಸುತ್ತೇನೆ," "ನಾನು ಮನುಷ್ಯನಾಗಿ ಅವತರಿಸಿದಾಗ ಒಳ್ಳೆಯವರ (ಜ್ಞಾನಿಗಳ) ಸಂಖ್ಯೆ ಬೆಳೆಯುವಂತೆ, ಅಜ್ಞಾನಿಗಳ ಸಂಖ್ಯೆ ಕಡಿಮೆಯಾಗುವಂತೆ ಮಾಡುತ್ತಿದ್ದೇನೆ. ನನ್ನ ಧರ್ಮಗಳನ್ನು ನಾನು ಪುನರುದ್ಧರಿಸುವುದರಿಂದ ಅಜ್ಞಾನಿಗಳ ಸಂಖ್ಯೆ ಕಡಿಮೆಯಾಗಿ, ಜ್ಞಾನಿಗಳ ಸಂಖ್ಯೆ ಬೆಳೆಯುತ್ತದೆ"** ಎಂದು ಹೇಳಿದ್ದಾನೆ.

ದೇವರು ಮನುಷ್ಯನಾಗಿ ಅವತರಿಸುತ್ತೇನೆ ಎಂದು ಹೇಳಿದ್ದಾನೆ. ಗತಕಾಲದಲ್ಲಿ ಎರಡು ಸಲ ಮನುಷ್ಯನಾಗಿ ಬಂದು ತನ್ನ ಧರ್ಮಗಳನ್ನು ತಿಳಿಸಿಹೋಗಿದ್ದಾನೆ. ಆಗ ಕಾಣಿಸುವ ಮನುಷ್ಯನಾಗಿ ಬಂದರೂ, ಆಗ ಆತನನ್ನು ಮನುಷ್ಯ ಎನ್ನುವುದಕ್ಕೆ ಅವಕಾಶವಿಲ್ಲ. ಅಂತಿಮ ದೈವಗ್ರಂಥ ಖುರಾನ್‌ನಲ್ಲಿ 15ನೇ ಸೂರಾದಲ್ಲಿ 28ನೇ ವಾಕ್ಯದಲ್ಲಿ **(15-28) "ನಾನು ಮಣ್ಣಿನಿಂದ ಒಬ್ಬ ಮನುಷ್ಯನನ್ನು ತಯಾರಿ ಮಾಡಲಿದ್ದೇನೆ"** ಎಂದು ಮೊದಲೇ ಹೇಳಿದ್ದಾನೆ. 29ನೇ ಆಯತ್‌ನಲ್ಲಿ **(15-29) "ನಾನು ಆತನನ್ನು ಪೂರ್ತಿಯಾಗಿ ತಯಾರಿಸಿ ನನ್ನ ಆತ್ಮನನ್ನು ಊದಿದಾಗ ನೀವೆಲ್ಲರೂ ಆತನ ಮುಂದೆ ಸಾಷ್ಟಾಂಗವೆರಗಿರಿ" (15-30) "ದೇವತೆಗಳೆಲ್ಲರೂ ಸಾಷ್ಟಾಂಗಬಿದ್ದರು"** ಎಂದು ಇದೆ. ಇಲ್ಲಿ "ಮನುಷ್ಯನನ್ನು ತಯಾರಿಸಿ ನನ್ನ ಆತ್ಮನನ್ನು ಊದಿದಾಗ, ಆ ಮನುಷ್ಯ ಸಜೀವವಾದಾಗ ನೀವು ಆತನ ಮುಂದೆ ಸಾಷ್ಟಾಂಗವೆರಗಿರಿ, ದೇವತೆಗಳೆಲ್ಲರೂ ಸಾಷ್ಟಾಂಗವೆರಗಿದರು" ಎಂದು ಹೇಳಿದ್ದಾರಲ್ಲವೆ! ಇಲ್ಲಿ ಗಮನಿಸಬೇಕಾದ ಕೆಲಸ ಏನೆಂದರೆ! ದೇವರು ತನ್ನ ಆತ್ಮವನ್ನು ಮನುಷ್ಯನ ಗೊಂಬೆಯೊಳಗೆ ಊದಿದಾಗ

ಅದರಲ್ಲಿ ದೇವರ ಆತ್ಮ ಸೇರಿದೆ ಆದರೆ ದೇವರು ಸೇರಲಿಲ್ಲ. ದೇವರು ತನ್ನ ಪ್ರತಿನಿಧಿಯಾಗಿ ಧರ್ಮ ಸ್ಥಾಪನೆಗೆ ಒಬ್ಬ ಮನುಷ್ಯನಹಾಗೆ ಇರುವ ವ್ಯಕ್ತಿಯನ್ನು ಕಳುಹಿಸಿದಾಗ ಆತನು ಸಾಧಾರಣ ಮನುಷ್ಯನಲ್ಲ. ಆದ್ದರಿಂದ ಆತನ ಹತ್ತಿರ ಸಾಷ್ಟಾಂಗವೆರಗಿರಿ ಎಂದು ಮನುಷ್ಯರಿಗೆ ಹೇಳಿದ್ದಾನೆ. ಅಷ್ಟೇ ಅಲ್ಲದೆ ದೇವತೆಗಳೆಲ್ಲರೂ ಸಾಷ್ಟಾಂಗವೆರಗಿದರು ಎಂದು ಸಹ ಹೇಳಿದ್ದಾನೆ. ಆಗ ಬಂದಿರುವ ಆತ್ಮ ದೇವರಿಗೆ ಪ್ರತಿನಿಧಿಯಾಗಿ ಬಂದಿರುವುದು ಆದ್ದರಿಂದ ದೇವರೊಂದಿಗೆ ಸಮಾನವಾಗಿದ್ದು ದೇವರ ಕೆಲಸ ಮಾಡುವುದಾಗಿ ಬಂದಿದೆ. ಆದ್ದರಿಂದ ಮನುಷ್ಯನಾಗಿ ಬಂದಿರುವ ಆತನಿಗೆ "ಭಗವಂತನು" ಎಂದು ಹೆಸರು ಬಂದಿದೆ. ಭಗವಂತನು ಎಂದಾಗ ಒಂದು ವಿಧವಾಗಿ ದೇವರ ಪ್ರತಿನಿಧಿಯೆಂದು ಹೇಳಬಹುದು. ದೇವರ ಕಾರ್ಯಗಳನ್ನು ಮನುಷ್ಯನಾಗಿದ್ದು ಮಾಡುವ ದೇವರ ಆತ್ಮವನ್ನು ಭಗವಂತನು ಎಂದು ಅನ್ನುತ್ತಿದ್ದೇವೆ. ಮನುಷ್ಯನ ಶರೀರದಲ್ಲಿರುವ ಆತ್ಮ, ಭಗವಂತನ ಶರೀರದಲ್ಲಿರುವ ಆತ್ಮ ಎರಡೂ ಒಂದೇ. ಆದರೂ ಮನುಷ್ಯರ ಶರೀರದಲ್ಲಿರುವ ಆತ್ಮ ಕರ್ಮದ ಪ್ರಕಾರ ಜೀವಾತ್ಮನನ್ನು ನಡೆಸುತ್ತಿರುತ್ತದೆ. ಕರ್ಮ ಮುಗಿದುಹೋದರೇ ಮೋಕ್ಷಕ್ಕೂ ಸಹ ಕಳುಹಿಸುವುದು. ಆದರೇ ಭಗವಂತನ ಶರೀರದಲ್ಲಿರುವ ಆತ್ಮ ಮನುಷ್ಯರ ಕರ್ಮಗಳಿಗೆ ಸಂಬಂಧಿಸಿದ ಕೆಲಸವನ್ನು ಮಾಡಲಿಲ್ಲ. ದೇವರ ಭಾವನೆಗೆ ತಕ್ಕ ವಿಧವಾಗಿ ಮನುಷ್ಯರಿಗೆ ಜ್ಞಾನ ತಿಳಿಸುವುದಕ್ಕೆ ಭಗವಂತನ ಆತ್ಮ ಬಂದಿದೆ. ಮನುಷ್ಯನ ಶರೀರದಲ್ಲಿ, ಭಗವಂತನ ಶರೀರದಲ್ಲಿರುವ ಎರಡು ಆತ್ಮಗಳು ಒಂದೇ ಆದರೂ ಅವುಗಳ ಕೆಲಸಗಳು ಬೇರೆಯಾಗಿರುತ್ತವೆ. ಮನುಷ್ಯ ಶರೀರದಲ್ಲಿನ ಆತ್ಮ ಕರ್ಮಪ್ರಕಾರವೇ ಜೀವಾತ್ಮನನ್ನು ಆಡಿಸುತ್ತಿದೆ. ಭಗವಂತನ ಶರೀರದಲ್ಲಿನ ಆತ್ಮ ದೇವರ ಧರ್ಮಗಳನ್ನು ತಿಳಿಸುತ್ತದೆ. ದೇವರು ಭಗವಂತನಾಗಿ ಬಂದಾಗ ದೇವರು ಪ್ರಪಂಚವೆಲ್ಲಾ ಮೊದಲು ಹೇಗಿದ್ದಾನೋ, ಭೂಮಿ ಮೇಲೆ ಭಗವಂತನು ಇರುವಾಗಲೂ ಸಹ ಹಾಗೆಯೇ ಅಣುಅಣುವಿನಲ್ಲೂ ವ್ಯಾಪಿಸಿದ್ದಾನೆ. ಭಗವಂತನು ದೇವರ ಪರವಾಗಿ ದೇವರ ಕೆಲಸವನ್ನು ಮಾಡಲು ಬಂದಿದ್ದಾನೆ ಹೊರತು, ದೇವರು ಕೆಲಸವನ್ನು ಆಗಲೂ ಸಹ ಮಾಡಲಿಲ್ಲವೆಂದೇ ಹೇಳಬಹುದು. ತಂದೆಯ

ಕೆಲಸವನ್ನು ಕುಮಾರನಾದ ಆತ್ಮವೇ ಮಾಡುತ್ತಿದೆ ಆದರೆ ತಂದೆಯಾದ ದೇವರು ಮಾಡಲಿಲ್ಲ. ಆತ್ಮ ಮನುಷ್ಯನ ಶರೀರದಲ್ಲಿರುವಾಗ ಧರ್ಮಗಳನ್ನು ಪ್ರಚಾರ ಮಾಡುವುದಿಲ್ಲ. ಆಗ ಮನುಷ್ಯನ ಭಾವನೆಯನ್ನನುಸರಿಸಿ, ಅವನ ಕರ್ಮ ವನ್ನನುಸರಿಸಿ ಅಧರ್ಮಗಳನ್ನು ಸಹ ಬೋಧಿಸುತ್ತದೆ. ಪ್ರತ್ಯೇಕವಾಗಿ ಭಗವಂತನಾಗಿ ಬಂದಾಗ ಮಾತ್ರ ಆತ್ಮ ಧರ್ಮಸಂಸ್ಥಾಪನೆ ಮಾಡುತ್ತದೆ. ಆದ್ದರಿಂದ ಧರ್ಮಸಂಸ್ಥಾಪನೆಯಲ್ಲಿ ಭಗವಂತನ ಶರೀರದಲ್ಲಿರುವ ಆತ್ಮ ಕೆಲಸ ಮಾಡುತ್ತಿದೆ. ದೇವರು ಯಾವಮಾತ್ರವೂ ಕೆಲಸ ಮಾಡಲಿಲ್ಲವೆಂದು ತಿಳಿಯುತ್ತಿದೆ. ಭಕ್ತಿಯೋಗದಿಂದ ಮೋಕ್ಷ ಹೊಂದುವ ಸಮಯದಲ್ಲಿ ಸಹ ದೇವರು ಕೆಲಸ ಮಾಡಲಿಲ್ಲ. ದೇವರು ಸ್ವತಃವಾಗಿ ಮೊದಲೇ ಏರ್ಪಡಿಸಿದ ಪದ್ಧತಿ ಪ್ರಕಾರ ಕರ್ಮ ಮುಗಿದುಹೋದ ಕೂಡಲೇ ಜೀವಾತ್ಮ ಮುಕ್ತಿ ಹೊಂದುವುದು ನಡೆಯುತ್ತಿದೆ. ಅಲ್ಲಿ ಆತ್ಮ ಪ್ರಮೇಯವೂ ಸಹ ಇಲ್ಲವೆಂದು ಹೇಳುತ್ತಿದ್ದೇವೆ. ಆತ್ಮ ಇರುವವರೆಗು ದೇವರು ಕೆಲಸ ಮಾಡುವುದಿಲ್ಲ. ಆತ್ಮ ಇಲ್ಲದಂತೆ ಹೋಗುವುದಿಲ್ಲ, ದೇವರು ಇಲ್ಲದಂತೆ ಹೋಗುವುದಿಲ್ಲ. ದೇವರು ನಿತ್ಯ ಜೀವವಿರುವವನಾಗಿ ಇದ್ದಾನೆ. ಹಾಗೆಯೇ ಆತ್ಮ ಸಹ ನಿತ್ಯ ಜೀವವಿರುವುದಾಗಿ ಇರುವಂತೆ ಮೊದಲು ದೇವರೇ ಮಾಡಿದ್ದಾನೆ. ಆದ್ದರಿಂದ ದೇವರು ಯಾವಾಗಲೂ ಇರುತ್ತಾನೆ, ಹಾಗೆಯೇ ಆತ್ಮ ಯಾವಾಗಲೂ ಇರುತ್ತದೆ. ಯಾರೂ ಇಲ್ಲದಂತೆ ಹೋಗುವುದಿಲ್ಲ. ಈಗ ಖುರಾನ್‌ನಲ್ಲಿನ ಪ್ರಥಮ ವಾಕ್ಯಗಳನ್ನು ನೋಡೋಣ.

**ಪ್ರಶ್ನೆ :– ಅಂತಿಮ ದೈವಗ್ರಂಥದಲ್ಲಿ ಪ್ರಥಮ ವಾಕ್ಯಗಳೆಂದು ನೀವು ಹೇಳುತ್ತಾ ಎರಡನೆ ಅಲ್‌ಬಖರ ಸೂರಾದಲ್ಲಿ ಅದೂ 2ನೇ ಆಯತ್‌ನಿಂದ ಮೊದಲ ವಾಕ್ಯವನ್ನು ಪ್ರಾರಂಭಿಸುತ್ತಿದ್ದೀರ. (2–2,3,4) ಆಯತ್‌ಗಳನ್ನು ಪ್ರಥಮ ವಾಕ್ಯಗಳೆಂದು ಹೇಳುತ್ತಿದ್ದೀರ. ಕ್ರಮಸಂಖ್ಯೆಯನ್ನು ಅನುಸರಿಸಿ ಮೊದಲ ಸುರಾದಲ್ಲಿನ ಮೊದಲ ವಾಕ್ಯಗಳು ಕ್ರಮವಾಗಿ 1, 2, 3 ಆಗುತ್ತದಲ್ಲವೆ! ಹಾಗೆ ವರಸೆಕ್ರಮವನ್ನು ಬಿಟ್ಟು ಮೊದಲ ವಾಕ್ಯಗಳೆಂದು ಎರಡನೆ ಸೂರಾದಲ್ಲಿ ಎರಡನೆ ವಾಕ್ಯದಿಂದ**

**ಹೇಳಬೇಕಾದ ಅಗತ್ಯವಿಲ್ಲ ಅಲ್ಲವೆ! ನಮ್ಮ ಅನುಮಾನವನ್ನು ತೀರಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ದೇವರು ಜ್ಞಾನಕ್ಕೆ ಬೆಲೆ ಕೊಡುತ್ತಿದ್ದಾನೆ ಆದರೆ, ವರಸೆ ಕ್ರಮಕ್ಕೆ ಬೆಲೆ ಕೊಡುವುದಿಲ್ಲ. ಎಲ್ಲಿ ಜ್ಞಾನ ಆರಂಭವಾಗಿದೆಯೋ ಅಲ್ಲಿಂದ ಮೂರು ವಾಕ್ಯಗಳನ್ನು ಲೆಕ್ಕಿಸಬೇಕೆಂದು ಗ್ರಂಥದ ಆರಂಭದಲ್ಲೇ ಹೇಳಿದ್ದೇವೆ. ಆದ್ದರಿಂದ ಅಲ್‌ಫಾತಿಹಾ ಸೂರಾದಲ್ಲಿನ ವಾಕ್ಯಗಳು ಜ್ಞಾನವಾಕ್ಯಗಳಲ್ಲ ಅವು ದೇವರ ಪ್ರಾರ್ಥನಾ ವಾಕ್ಯಗಳು. ಆದ್ದರಿಂದ ಆ ವಾಕ್ಯಗಳನ್ನು ಮೊದಲ ವಾಕ್ಯಗಳಾಗಿ ತೆಗೆದುಕೊಂಡಿಲ್ಲ. ಎರಡನೆ ಸೂರಾದಲ್ಲಿ ಎರಡನೆ ವಾಕ್ಯದಿಂದ ಜ್ಞಾನ ಪ್ರಾರಂಭವಾಗಿದೆ. ಅಲ್ಲಿ ಎರಡನೆ ಸೂರಾ ಮೊದಲವಾಕ್ಯವೊಂದರ ಅರ್ಥ ಯಾರಿಗೂ ತಿಳಿಯದಿರುವುದರಿಂದ, ಅಲ್ಲಿ ವಾಕ್ಯವೂ ಇಲ್ಲದಂತೆ ಕೇವಲ ಒಂದು ಪದ ಮಾತ್ರ ಇರುವುದರಿಂದ, ಎರಡನೆ ವಾಕ್ಯದಿಂದ ಮೂರು ಪ್ರಾರಂಭವಾಕ್ಯಗಳನ್ನು ತೆಗೆದುಕೊಳ್ಳಬೇಕಾಗಿ ಬಂದಿದೆ.

ಅಂತಿಮ ದೈವ ಗ್ರಂಥದಲ್ಲಿ ಪ್ರಥಮ ವಾಕ್ಯ (2-2) **"ಇದು (ಖುರಾನ್) ಒಂದು ದಿವ್ಯ ಗ್ರಂಥ. ಇದರಲ್ಲಿ ಯಾವಮಾತ್ರವೂ ಸಂದೇಹವಿಲ್ಲ. ದೈವ ಭೀತಿ ಇರುವವರಿಗೆ ಇದು ಮಾರ್ಗದರ್ಶಕತ್ವ"** ಎರಡನೆ ವಾಕ್ಯ (2-3) **"ಯಾರಾದರೇ ಅಗೋಚರ ಯಾಥಾರ್ಥ ವಿಷಯವನ್ನು ವಿಶ್ವಾಸಿಸುತ್ತಾರೋ, ನಮಾಜ್‌ನ್ನು ಸ್ಥಾಪಿಸುತ್ತಾರೋ, ಮತ್ತು ನಾವು ಪ್ರಸಾದಿಸಿದ ಜೀವನೋಪಾದಿಯಿಂದ (ಸಂಪತ್ಸೌಕರ್ಯಗಳಿಂದ) (ನಮ್ಮ ಮಾರ್ಗದಲ್ಲಿ) ಖರ್ಚು ಮಾಡುತ್ತಾರೋ."** ಮೂರನೆಯ ವಾಕ್ಯ (2-4) **"ಯಾರಾದರೇ ನಿನ್ನ ಮೇಲೆ ಅವತರಿಸುವಂತೆ ಮಾಡಿದ ಗ್ರಂಥವನ್ನು (ಈ ಖುರಾನ್‌ನನ್ನು) ಮತ್ತು ನಿನಗೆ ಪೂರ್ವದಲ್ಲಿ ಅವತರಿಸುವಂತೆ ಮಾಡಲ್ಪಟ್ಟವುಗಳನ್ನು (ಎರಡು ದಿವ್ಯ ಗ್ರಂಥಗಳನ್ನು) ವಿಶ್ವಾಸಿಸುತ್ತಾರೋ ಮತ್ತು ಪರಲೋಕ ಜೀವನವನ್ನು ಧೃಢವಾಗಿ ಯಾರಾದರೇ ನಂಬುತ್ತಾರೋ."** ಎಂದು ಹೇಳಲ್ಪಟ್ಟಿದೆ. ಮೊದಲ ವಾಕ್ಯದಲ್ಲಿ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥವನ್ನು ಕುರಿತು ಹೇಳುತ್ತಾ "ಇದು ಒಂದು

ದಿವ್ಯ ಗ್ರಂಥವೆಂದು, ಇದು ದೈವಭೀತಿ ಇರುವವರಿಗೆ ಮಾರ್ಗದರ್ಶಿನಿ" ಎಂದು ಹೇಳಿದ್ದಾರೆ. ಇದು ಸ್ಥೂಲವಾದ ವಾಕ್ಯವೇ ಅಗಿರುವುದರಿಂದ ಇದರಲ್ಲಿ ವಾಕ್ಯದಲ್ಲಿ ಹೇಳಿರುವುದು ಎಲ್ಲರಿಗೂ ಅರ್ಥವಾಗಿರುತ್ತದೆ. ಈ ವಾಕ್ಯ ಮೊಟ್ಟಮೊದಲೇ ಗ್ರಂಥವೊಂದರ ಪ್ರಾಧಾನ್ಯತೆಯನ್ನು ತಿಳಿಸಿದೆ. ದೇವರ ಮಾರ್ಗದಲ್ಲಿ ಪ್ರಯಾಣಿ ಸುವವನಿಗೆ ದಾರಿ ತೋರಿಸುವ ಗ್ರಂಥವೆಂದು ಸಹ ಹೇಳಿದ್ದಾರೆ. ಇನ್ನು ಎರಡನೆ ವಾಕ್ಯದೊಳಗೆ ಹೋಗಿ ನೋಡಿದರೆ ಇಲ್ಲಿ ಸ್ವಲ್ಪ ಅಗೋಚರವಾದ ಸೂಕ್ಷ್ಮ ಜ್ಞಾನ ಒಳಗೊಂಡಿದೆ. ಎರಡನೆ ವಾಕ್ಯದಲ್ಲಿರುವ ಸೂಕ್ಷ್ಮ ಅರ್ಥವೇನಿದೆಯೆಂದು ನೋಡಿದರೆ ಈ ರೀತಿ ಅರ್ಥವಾಗುತ್ತಿದೆ. ಈ ಆಯತ್ ಮೂರು ಭಾಗಗಳಾಗಿ ಇದೆ. ಮೂರು ಭಾಗಗಳು ಸೂಕ್ಷ್ಮ ಅರ್ಥದಿಂದಲೇ ಇವೆಯೆಂದು ಹೇಳಬಹುದು. ಮೊದಲ ಭಾಗ "ಯಾರಾದರೇ ಅಗೋಚರ ಯಥಾರ್ಥ ವಿಷಯವನ್ನು ನಂಬುತ್ತಾರೋ" ಎಂದು ಇದೆ. ಇಲ್ಲಿ 'ಅಗೋಚರ' ಎಂದರೆ "ಕಣ್ಣಿಗೆ ಕಾಣಿಸದ" ಎಂದು ಅರ್ಥ. ಅಷ್ಟೇ ಅಲ್ಲದೆ ಇಲ್ಲಿ ಮಾತ್ರ ಐದು ಜ್ಞಾನೇಂದ್ರಿಯಗಳಿಗೆ ತಿಳಿಯದ ವಿಷಯ ಎಂದು ಅರ್ಥವಾಗುತ್ತಿದೆ. ಶಬ್ದ, ರೂಪ, ರಸ(ರುಚಿ), ಗಂಧ, ಸ್ಪರ್ಶಗಳಿಗೆ ಯಾವ ಮಾತ್ರವೂ ತಿಳಿಯದ ವಿಷಯವನ್ನು ಅಗೋಚರ ವಿಷಯವೆಂದು ಹೇಳಿದಂತೆ ತಿಳಿಯುತ್ತಿದೆ. ಅಗೋಚರ ಯಥಾರ್ಥ ವಿಷಯವೆಂದರೇ ತಿಳಿಯಲಾಗದ ಸತ್ಯವಾದ ವಿಷಯವನ್ನು ಯಾರಾದರೆ ನಂಬುತ್ತಾರೋ ಎಂದು ವಾಕ್ಯದಲ್ಲಿ ಹೇಳಿದ್ದಾರೆ. ಅಗೋಚರ ವಿಷಯವನ್ನು ನಂಬಿದಾಗಲೇ ಸತ್ಯವೆಂದು ತಿಳಿಯುಬಲ್ಲದು. ಮನುಷ್ಯನಿಗೆ ತಿಳಿದರೂ ತಿಳಿಯದಿದ್ದರೂ ಸತ್ಯವಾದ ವಿಷಯವೇ ಅಗೋಚರವಾಗಿ ಇದೆ. ಅಗೋಚರ ವಾಗಿರುವುದನ್ನು ನಂಬಬೇಕೆಂದರೇ ಬಹಳ ಕಷ್ಟ. ಬಹಳ ಜನ ಕಾಣಿಸುವುದನ್ನೇ ನಂಬುತ್ತಾರೆ ಆದರೆ, ಕಾಣಿಸದಿರುವುದನ್ನು ನಂಬುದಿಲ್ಲ. ಕೆಲವರು ಭೌತಿಕವಾದಿಗಳು ಅಭೌತಿಕವನ್ನು ಯಾವ ಕಾರಣಕ್ಕೂ ನಂಬುವು ದಿಲ್ಲವೆಂದು ಹೇಳುತ್ತಿರುತ್ತಾರೆ. ಭೌತಿಕ ಎಂದರೆ ಕಾಣಿಸುವುದು, ಅಭೌತಿಕ ಎಂದರೆ ಕಾಣಿಸದಿರುವುದು ಎಂದು ಅರ್ಥ.

ಭೌತಿಕ, ಅಭೌತಿಕ (ಕಾಣಿಸುವುದು, ಕಾಣಿಸದಿರುವುದು) ಹೇಗೆ ಇವೆಯೆಂದರೆ ಶರೀರ ಕಾಣಿಸುತ್ತಿದೆ ಆದ್ದರಿಂದ ಭೌತಿಕ ಎಂದು ಅನ್ನಬಹುದು. ಶರೀರದಲ್ಲಿ ಶ್ವಾಸ ಆಡುವಾಗ ಆ ಶರೀರದಲ್ಲಿ ಜೀವಾತ್ಮ ಇದ್ದಾನೆನ್ನುವುದು ಯಥಾರ್ಥ. ಆದರೇ ಜೀವಿಯು ಕಾಣಿಸುವುದಿಲ್ಲ ಆದ್ದರಿಂದ ಜೀವಾತ್ಮ ಅಭೌತಿಕ ಎನ್ನಬಹುದು. ಜೀವಿ ಎನ್ನುವವನು ನಂಬುವಂತಹ ಯಥಾರ್ಥವೇ (ಸತ್ಯವೇ) ಆದರೂ ಅವನನ್ನು ನಂಬಲಾರದಷ್ಟು ಕಾಣಿಸದವನಾಗಿ ಇದ್ದಾನೆ. ಶರೀರ ಬದುಕಿದೆ ಆದ್ದರಿಂದ ಜೀವಿಯು ಶರೀರದಲ್ಲಿ ಇದ್ದಾನೆ ಎನ್ನುವುದು ನೂರಕ್ಕೆ ನೂರುಪಾಲು ಸತ್ಯವೇ. ಆದರೇ ಜೀವಿಯು ಅಭೌತಿಕವಾಗಿ ಕಾಣಿಸದೆ ಇದ್ದಾನೆ. ಆದ್ದರಿಂದ ಕೆಲವರು ಜೀವಿಯನ್ನು ಸ್ವಲ್ಪ ನಂಬಿ ಸ್ವಲ್ಪ ನಂಬದಂತಿದ್ದಾರೆ. ಕೆಲವರು ಜೀವಿಯು ಇದ್ದಾನೆನ್ನುವುದಕ್ಕೆ ಪ್ರತ್ಯಕ್ಷಸಾಕ್ಷ್ಯವಾಗಿ ಶರೀರದಲ್ಲಿ ಜೀವಿಯ ಸ್ಪಂದನೆ ಇದೆ, ಶ್ವಾಸ ಇದೆ. ಆದ್ದರಿಂದ ಜೀವಿಯನ್ನು ಸತ್ಯವೆಂದು ಹೇಳುತ್ತಿದ್ದೇವೆ. ಎಷ್ಟು ನಂಬಿದರೂ ಜೀವಿಯು ಕಾಣಿಸದೇ ಹೋಗುವುದರಿಂದ ನಂಬಲಾರದವರು ಬಹಳ ಜನ ಇದ್ದಾರೆ. ನಮ್ಮ ಶರೀರದಲ್ಲಿ ಜೀವಿಯು, ದೇವರು ಇಬ್ಬರೂ ಅಗೋಚರವಾಗಿ ಇದ್ದಾರೆ. ಜೀವಿಯು, ದೇವರೇ ಅಲ್ಲದೆ ಅವರಿಬ್ಬರಿಗೂ ಮಧ್ಯದಲ್ಲಿ ಆತ್ಮ ಇರುತ್ತಿದೆ. ಒಟ್ಟಾರೆ ಮೂರು ಆತ್ಮಗಳು ಶರೀರದಲ್ಲಿ ನಿವಾಸಿಸುತ್ತಾ ಅನೇಕ ಕಾರ್ಯಗಳ ರೂಪವಾಗಿ ಅನೇಕ ಸಂದರ್ಭಗಳಲ್ಲಿ ಅವುಗಳ ಇರುವಿಕೆಯನ್ನು ಸಾರಿಕೊಳ್ಳುತ್ತಿದ್ದರೂ ಈ ಮೂರು ಆತ್ಮಗಳು ಅಗೋಚರ ವಾಗಿರುವವಾದ್ದರಿಂದ ನಂಬಲಾರದೆ ಹೋಗುತ್ತಿದ್ದಾರೆ. ಸ್ವಲ್ಪ ಜ್ಞಾನ ತಿಳಿದವರು ಮೂರು ಆತ್ಮಗಳ ವಿಷಯವನ್ನು ಸ್ವಲ್ಪ ತಿಳಿದರೂ, ಮೂರು ಆತ್ಮಗಳಿರುವಂತೆ ಯಾವ ಮಾತ್ರವೂ ಹೊರಗೆ ತಿಳಿಯುವ ನಿರ್ಧಾರಣವಾಗಲೀ, ನಿರೂಪಣೆ ಯಾಗಲೀ ಇಲ್ಲ. ಒಳಗಿರುವ ಆತ್ಮಗಳ ಕೆಲಸಗಳು ಹೊರಗಿನ ಶರೀರದಲ್ಲಿ ಕಾಣಿಸುತ್ತಿದ್ದರೂ ಸ್ವಲ್ಪ ಸತ್ಯವೆಂದು ತಿಳಿದರೂ, ಆ ಕೆಲಸಗಳು ಮೂರು ಆತ್ಮಗಳವೇಯೆಂದು ಹೇಳುವುದಕ್ಕೆ ಆಧಾರವಿಲ್ಲ.

ಅಭೌತಿಕ ಭೌತಿಕದಲ್ಲಿದ್ದರೂ, ಅಭೌತಿಕ ಕಾಣಿಸದಿರುವುದರಿಂದ, ಯಥಾರ್ಥ ಅಗೋಚರ ವಿಷಯಗಳನ್ನು ಬಹಳ ಜನ ನಂಬಲಾರದೆ ಹೋಗುತ್ತಿದ್ದಾರೆ. ಅಂತಹ ವಿಷಯಗಳನ್ನು ಯಾರಾದರೇ ನಂಬುತ್ತಾರೋ ಅವರೇ ಸಾಫಲ್ಯವನ್ನು ಹೊಂದಬಲ್ಲರೆಂದು ಹೇಳಿದ್ದರೂ ಅವುಗಳನ್ನು ಕುರಿತು ಆಲೋಚಿಸುವವರಾಗಲೀ, ತಿಳಿಯಬೇಕೆನ್ನುವ ಪ್ರಯತ್ನ ಮಾಡುವವರಾಗಲೀ ಇಲ್ಲ. ಆದ್ದರಿಂದ ಅಗೋಚರ ವಿಷಯವನ್ನು ಮೊದಲಿಗೇ ನಂಬಿರೆಂದು ಹೇಳುವವರು ಇದ್ದಾರೆ. ಕೆಲವರು ಹೇತುವಾದ ಸಂಘಗಳೆಂದೂ, ನಾಸ್ತಿಕವಾದ ಸಂಘಗಳೆಂದೂ ಹೆಸರುಗಳು ಇಟ್ಟುಕೊಂಡವರು ದೇವರು ಒಂದು ಅಭೂತ ಕಲ್ಪನೆ ಎಂದೂ, ದೇವರನ್ನು ನಿರೂಪಿಸಬೇಕೆನ್ನುವ ಪ್ರಯತ್ನದಲ್ಲಿ ಜೀವಾತ್ಮ ಎನ್ನುವವನನ್ನು ಆಸ್ತಿಕವಾದಿಗಳು ತೆರೆಮೇಲೆಗೆ ತಂದಿದ್ದಾರೆಂದೂ, ಜೀವಿಯು, ದೇವರು ಇಬ್ಬರು ಕಲ್ಪಿತವೇ ಎಂದು, ಜೀವಿಯು ದೇವರು ಎನ್ನುವವರು ಇಬ್ಬರು ಇದ್ದಾರೆಂದು ಹೇಳುವುದಕ್ಕೆ ಕರ್ಮ ಎನ್ನುವ ಮತ್ತೊಂದನ್ನು ಕಲ್ಪಿಸಿ ಹೇಳುತ್ತಿದ್ದಾರೆ. ಇವೆಲ್ಲವೂ ಅಸತ್ಯಗಳೇ. ಶರೀರದಲ್ಲಿ ರಸಾಯನ ಕ್ರಿಯೆ ನಡೆಯುತ್ತಿರುವವರೆಗು ಮೆದುಳು ಕೆಲಸಮಾಡುತ್ತಿದೆ. ಮೆದುಳು ಹೇಳಿದಂತೆ ಕಾರ್ಯಗಳು ನಡೆಯುತ್ತಿವೆ. ಯಾವಾಗಾದರೇ ರಾಸಾಯನಿಕ ಕ್ರಿಯೆ ನಿಂತುಹೋಗುತ್ತದೋ ಆಗ ಯಾವ ಅವಯವವು ಕೆಲಸ ಮಾಡುವುದಿಲ್ಲ. ಮೆದುಳಿನಲ್ಲಿ ಸಹ ಕೆಲಸ ನಿಂತುಹೋಗುತ್ತದೆ. ಅದನ್ನೇ ಮರಣ ಎನ್ನುತ್ತಿದ್ದೇವೆ ಎಂದು ಹೇತುವಾದಿಗಳು ಹೇಳುತ್ತಿರುವರು. ಕೆಲವರು ಅವರು ಹೇಳುವ ಮಾತುಗಳನ್ನೇ ಕೇಳುತ್ತಿದ್ದಾರೆ. ಅಭೌತಿಕವಾದುದು ಇಲ್ಲವೇ ಇಲ್ಲ ಎಂದು ಹೇಳುತ್ತಿರುವರು. ಅಭೌತಿಕ ಎನ್ನುವುದು ಪೂರ್ತಿ ಅಸತ್ಯ ಎಂದು ಕೆಲವರು ಸಂಘಗಳನ್ನು ಇಟ್ಟುಕೊಂಡು ಪ್ರಚಾರ ಮಾಡುತ್ತಿದ್ದಾರೆ. ಈ ರೀತಿಯಾಗಿ ಜೀವಿಯು, ದೇವರು ಎನ್ನುವವು ಪೂರ್ತಿ ಸತ್ಯವೇ ಆದರೂ, ಅವುಗಳನ್ನು ನಂಬದವರಿರುವುದರಿಂದ ಯಾರು ವಿಶ್ವಾಸಿಸುತ್ತಾರೋ ಎಂದು ಹೇಳಬೇಕಾಗಿ ಬಂದಿದೆ.

ನಂತರದ ವಿಷಯ ನಮಾಜ್‌ಗಳನ್ನು ಕುರಿತಿರುವ ವಿಷಯ. ಈದಿನ ನಮಾಜ್ ಎಂದು ದೇವರ ಪ್ರಾರ್ಥನೆಯನ್ನು ಕರೆಯುತ್ತಿದ್ದೇವೆ. ದೇವರ ದೃಷ್ಟಿಯಲ್ಲಿ ಇಲ್ಲಿಯವರೆಗು ಮನುಷ್ಯರು ನಮಾಜ್ ಮಾಡಲಿಲ್ಲವೆನ್ನುವ ಭಾವನೆಯಿಂದ ಈಗ ಯಾರಾದರೇ ನಮಾಜನ್ನು ನೆಲೆಗೊಳಿಸುತ್ತಾರೋ ಎಂದು ಹೇಳಿದ್ದಾರೆ. ನಮಾಜ್ ಎನ್ನುವ ಪ್ರಾರ್ಥನೆಯನ್ನು ಮುಸ್ಲೀಮ್ ಸಮಾಜ ಒಟ್ಟಾರೆ ಪ್ರತಿ ದಿನ ಮಾಡುತ್ತಿದೆ. ಪ್ರಪಂಚದಲ್ಲಿ ಎಲ್ಲ ಮತಗಳಿಗಿಂತ ಹೆಚ್ಚಾಗಿ ಪ್ರಾರ್ಥನೆಯಲ್ಲಿ ಕಾಲ ಕಳೆಯುತ್ತಿದ್ದರು, ಹೆಚ್ಚಾಗಿ ಪ್ರಾರ್ಥನೆ ಮಾಡುವವರು ಮುಸ್ಲಿಮ್ ಮತದಲ್ಲಿ ಇದ್ದಾರೆ. ಹಾಗೆ ಇರುವಾಗ ನೀವು (ಮನುಷ್ಯರು) ನಮಾಜ್ (ಪ್ರಾರ್ಥನೆ) ಮಾಡಲಿಲ್ಲವೆಂದು ಹೇಳುತ್ತಿದ್ದೀರೇನು? ಎಂದು ಕೇಳಬಹುದು. ಅದಕ್ಕೆ ನನ್ನ ಉತ್ತರ ಈ ರೀತಿಯಾಗಿ ಇದೆ. ಮುಸ್ಲಿಮ್‌ರು ಉಳಿದ ಎರಡು ಮತಗಳಿಗಿಂತ ಪ್ರಾರ್ಥನ ವಿಷಯದಲ್ಲಿ ಮುಂದಿದ್ದಾರೆ. ಅವರ ಜೀವನದಲ್ಲಿ ಪ್ರಾರ್ಥನೆಗೇ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುತ್ತಿದ್ದಾರೆ. ಆದರೇ ಅವರು ಮಾಡುವುದು ವಾಸ್ತವವಾಗಿ ಪ್ರಾರ್ಥನೆ ಅಲ್ಲ. ಯಾವ ಮಾತಾಗಲೀ, ಯಾವ ಮಂತ್ರವಾಗಲೀ ಪ್ರಾರ್ಥನೆಯಲ್ಲಿ ಇರಬಾರದು. ಒಂದು ಮಾತನ್ನು ಉಚ್ಚರಿಸುತ್ತಾ ಮಾಡುವ ಪ್ರಾರ್ಥನೆ ತಪಸ್ಸಿನ ಕೆಳಗೆ ಬರುತ್ತದೆ. ತಪಸ್ಸು ಬೇರೆ, ಪ್ರಾರ್ಥನೆ ಬೇರೆ, ಪ್ರಾರ್ಥನೆಯನ್ನು **ಯೋಗ** ಎಂದು ಬ್ರಹ್ಮವಿದ್ಯಾ ಭಾಷೆಯಲ್ಲಿ ಹೇಳಬಲ್ಲೆವು. ಪ್ರಾರ್ಥನೆ ಯಾವುದೋ ತಿಳಿಯದೇ ತಪಸ್ಸನ್ನು ಆಚರಿಸುತ್ತಾ ತಾವು ಯೋಗ (ಪ್ರಾರ್ಥನೆ) ಮಾಡಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಮನುಷ್ಯರು ಎಲ್ಲರೂ ತಪ್ಪಾಗಿ ಅರ್ಥೈಸಿಕೊಂಡು ಒಂದು ಮಂತ್ರವನ್ನು ಜಪಿಸುವ ಹಿಂದೂ ತಾನು ಮಾಡುವುದು ಪ್ರಾರ್ಥನೆ ಎಂದು ಅಂದುಕೊಳ್ಳುತ್ತಿದ್ದಾನೆ. ಹಾಗೆಯೇ ಬಾಯಿ ಕದಲಿಸುತ್ತಾ ಮಾತುಗಳಿಂದ ಜೋರಾಗಿ ಕೇಳಿದಂತೆ ಮಾತನಾಡುತ್ತಾ ಕ್ರೈಸ್ತರು ಪ್ರಾರ್ಥನೆ ಮಾಡುತ್ತಿದ್ದಾರೆ. ಹಿಂದೂಗಳಿಗೆ ಮಂತ್ರಗಳು, ಕ್ರೈಸ್ತರಿಗೆ ಮಾತುಗಳಿರುವುದರಿಂದ ಅದು ಪ್ರಾರ್ಥನೆ ಆಗಲಿಲ್ಲ. ಹಾಗೆ ಮಾಡುವುದು ಪ್ರಾರ್ಥನೆಯೆಂದು ನಾವು ಅಂದುಕೊಂಡರೂ ಅದು ಪ್ರಾರ್ಥನೆ ಅಲ್ಲ ತಪಸ್ಸಾಗುತ್ತದೆ.

ಎರಡು ಮತಗಳಾಗಿ ಇರುವ ಹಿಂದೂಗಳಲ್ಲಿ, ಕ್ರೈಸ್ತರಲ್ಲಿ ಪ್ರಾರ್ಥನೆ (ಯೋಗ) ಇಲ್ಲ ಇರುವುದೆಲ್ಲಾ ತಪಸ್ಸೇಯೆಂದು ಅರ್ಥವಾಗಿದೆ. ದೇವರ ಪ್ರಾರ್ಥನೆ ವಿಷಯದಲ್ಲಿ ಮೊದಲ ಸಾಲಿನಲ್ಲಿ ಇದ್ದಾರೆನ್ನುವ ಮುಸ್ಲಿಮ್‌ರು ಸಹ ಮನಸ್ಸಿನಲ್ಲಿ ಏಳು ಆಯತ್‌ಗಳನ್ನು ಸ್ಮರಿಸುತ್ತಿರುವುದರಿಂದ ಅದೂ ಸಹ ತಪಸ್ಸಿನ ಕೆಳಗೇ ಬಂದಿದೆ. ತಪಸ್ಸುಗಳಿಗಿಂತ ಯೋಗವೇ ಶ್ರೇಷ್ಠವಾದುದು ಎಂದು ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ ಆತ್ಮ ಸಂಯಮಯೋಗದಲ್ಲಿ 46ನೇ ಶ್ಲೋಕದಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ 46. ತಪಸ್ವಿಭ್ಯೋಧಿಕೋ ಯೋಗೀ ಜ್ಞಾನಿಭ್ಯೋಪಿ ಮತೋಧಿಕಃ ।**
**ಕರ್ಮಿಭ್ಯ ಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**

**ಭಾವಾರ್ಥ :– "ಯೋಗಿ ತಪಸ್ವಿಕರಿಗಿಂತ ಉತ್ತಮನು, ಅಧಿಕನು. ಕರ್ಮಗಳನ್ನು ಮಾಡುವವರಿಗಿಂತ ಉತ್ತಮನು. ಜ್ಞಾನಿಗಳಿಗಿಂತ ಘನನು. ಆಗಿರುವುದರಿಂದ ಅರ್ಜುನಾ ನೀನು ಯೋಗಿಯೇ ಆಗು"** ಎಂದು ಭಗವಂತನು ಅರ್ಜುನನಿಗೆ ಹೇಳಿದ್ದಾನೆ ಈ ವಿಧವಾಗಿ ಯೋಗ ತಪಸ್ಸುಗಳಿಗಿಂತ ಶ್ರೇಷ್ಠವಾಗಿರುವುದರಿಂದ, ಯೋಗದಿಂದಲೇ ದೇವರು ತಿಳಿಯುವುದರಿಂದ, ತಪಸ್ಸುಗಳಿಂದ ದೇವರು ತಿಳಿಯುವುದಿಲ್ಲ ಆದ್ದರಿಂದ ತಿಳಿಯದೇ ಮಾಡುವ ತಪಸ್ಸುಗಳನ್ನು ಬಿಟ್ಟು ಯೋಗವೇ ಆಚರಿಸುವುದು ಒಳ್ಳೆಯದು. ಇದೇ ವಿಷಯವನ್ನೇ ಅಂತಿಮ ದೈವಗ್ರಂಥದಲ್ಲಿ ಪ್ರಥಮ ವಾಕ್ಯಗಳಲ್ಲಿ (2–3) ವಾಕ್ಯದಲ್ಲಿ **'ನಮಾಜನ್ನು ಸಂಸ್ಥಾಪಿಸುವವನು'** ಎಂದು ಹೇಳಿದ್ದಾನೆ. ಹಾಗೆ ಹೇಳಿರುವುದರಿಂದ ಈದಿನ ನಮಾಜ್ ಎನ್ನುವುದು ಸರಿಯಾದ ಪದ್ಧತಿಯಲ್ಲಿ ಇಲ್ಲವೆಂದೂ, ಅದು ಬಿದ್ದುಹೋಗಿರುವ ನಮಾಜಾಗಿ ಇದೆಯೆಂದೂ, ಅದನ್ನು ಪುನಃ ಪ್ರತಿಷ್ಠಿಸಬೇಕೆಂದು, ಅದನ್ನೇ ನೆಲೆಗೊಳಿಸಿರೆಂದು ಹೇಳುವುದೆಂದು ಅರ್ಥ ಮಾಡಿಕೊಳ್ಳಬೇಕು. ಖುರಾನ್‌ನಲ್ಲಿ ಹೇಳಲಾಗಿರುವ ವಾಕ್ಯವನ್ನನುಸರಿಸಿ ನಾವು ಇಂದಿನಿಂದ ನಮಾಜ್‌ನ್ನು ಪುನಃ ನೆಲೆಗೊಳಿಸುವುದಕ್ಕೆ ಪ್ರಯತ್ನಿಸೋಣ. ನಮಾಜ್ ಎಂದರೇ ಅರ್ಥವನ್ನು ಮೊದಲು ತಿಳಿಯುವುದಾದರೇ, ನಂತರ ನಮಾಜ್‌ನ್ನು

ಹೇಗೆ ಸಂಸ್ಥಾಪಿಸಬೇಕೆನ್ನುವ ನಿರ್ಣಯಕ್ಕೆ ಬರಬಹುದು. 'ನಮಾಜ್' ಎನ್ನುವ ಪದದಲ್ಲಿ ಮೂರು ಶಬ್ದಗಳು ಸೇರಿದ ಪದವಾಗಿ ಇದೆ. ನಮಾಜ್‌ನ್ನು ಬೇರ್ಪಡಿಸಿ ನೋಡಿದರೆ ನ, ಮ, ಜ್ ಎನ್ನುವ ಮೂರು ಅಕ್ಷರಗಳು ಕಾಣಿಸುತ್ತಿವೆ. ಅದರಲ್ಲಿರುವ ಒಂದೊಂದು ಅಕ್ಷರಕ್ಕೂ ಒಂದೊಂದು ಅರ್ಥವಿದೆ. **'ನ'** ಎಂದರೆ ಬೇಡ ಎಂದೂ, **'ಮ'** ಎಂದರೇ ನನಗೆ ಎಂದೂ, **'ಜ್'** ಎಂದರೆ ಜನ್ಮಗಳೆಂದೂ ಅರ್ಥ. ಎಲ್ಲಾ ಕೂಡಿಸಿ ನೋಡಿದರೆ **'ನನಗೆ ಜನ್ಮಗಳು ಬೇಡ'** ಎನ್ನುವ ಅರ್ಥ ಇದೆ.

'ನನಗೆ ಜನ್ಮಗಳು ಬೇಡ' ಎನ್ನುವ ಭಾವನೆಯಿಂದ ಯಾರೂ ಪ್ರಾರ್ಥನೆ ಮಾಡುತ್ತಿಲ್ಲ. ಜನ್ಮಗಳು ಬೇಡ ಎಂದರೇ ಪರೋಕ್ಷವಾಗಿ ಈ ಲೋಕ ಬೇಡ ಪರಲೋಕವಾದ ಮೋಕ್ಷ ಬೇಕೆಂದು ಅರ್ಥ. ಒಂದು ಹಿಂದೂ ಮತದಲ್ಲಿ ಹೊರತುಪಡಿಸಿ ಉಳಿದ ಮತಗಳಲ್ಲಿ ಜನ್ಮಗಳು ಇಲ್ಲ ಎನ್ನುವ ಊಹಾಪೋಹ ದಲ್ಲಿಯೇ ಇದ್ದಾರೆ. ಮೊದಲೇ ಆ ವಿಧವಾಗಿ ಇರುವುದರಿಂದ ಯಾರೂ ಪ್ರಾರ್ಥನೆಯಲ್ಲಿ ಜನ್ಮಗಳು ಬೇಡ ಎನ್ನುವ ಉದ್ದೇಶವನ್ನು ಹೊಂದಿರಲಿಲ್ಲ. ನಮಾಜ್ ವಿಷಯ ಸಂಪೂರ್ಣವಾಗಿ ತಿಳಿಯಬೇಕೆಂದರೇ ನಮ್ಮ ರಚನೆಗಳಲ್ಲಿನ **"ಒರೆಗಲ್ಲು"** ಗ್ರಂಥವನ್ನು ಓದಿರಿ. ಆಗ ನಮಾಜ್‌ನ್ನು ಸಂಸ್ಥಾಪಿಸಿರಿ ಎನ್ನುವ ಮಾತಿಗೆ ಪೂರ್ತಿಯಾಗಿ ವಿವರ ತಿಳಿಯುತ್ತದೆ. ನಮಾಜ್‌ನಲ್ಲಿ (ಪ್ರಾರ್ಥನೆಯಲ್ಲಿ) ದೇವರ ಭಾವನೆ ಬೇರೆಯಾಗಿರುವಾಗ ಮನುಷ್ಯರು ಇನ್ನೊಂದು ವಿಧಾನದಲ್ಲಿ ಪ್ರಾರ್ಥನೆ ಮಾಡುತ್ತಾ ಅದೇ ನಿಜವಾದ ಪ್ರಾರ್ಥನೆ ಅಂದುಕೊಳ್ಳುವುದು ಒಳ್ಳೆಯದಲ್ಲ. ಮನುಷ್ಯರು ಮಾಡುವ ಪ್ರಾರ್ಥನೆ ಎಲ್ಲ ಮತಗಳಲ್ಲಿಯೂ ಸರಿಯಾಗಿ ಇಲ್ಲದಿರುವುದರಿಂದ, ಖುರಾನ್ ಗ್ರಂಥದಲ್ಲಿ ಮೂರು ಪ್ರಥಮ ವಾಕ್ಯಗಳಲ್ಲಿ ದೇವರು ನಮಾಜ್‌ನ್ನು ಕುರಿತು ಹೇಳುತ್ತಾ, ಯಾರು ನಮಾಜ್‌ನ್ನು ಸ್ಥಾಪಿಸುತ್ತಾನೋ ಅವನು ತನ್ನ ಮಾರ್ಗದಲ್ಲಿ ಇರುವವನಾಗಿ ಗುರುತಿ ಸಲ್ಪಡುತ್ತಾನೆಂದು ತಿಳಿಸಿದ್ದಾನೆ. ಅಷ್ಟೇ ಅಲ್ಲದೆ ಎರಡನೆ ವಾಕ್ಯದಲ್ಲಿ ಮತ್ತೊಂದು ಮಾತನ್ನು ಸಹ ಹೇಳಿದ್ದಾನೆ. ಅದೇನೆಂದರೇ! ನಾವು ಪ್ರಸಾದಿಸಿದ

ಜೀವನೋಪಾಧಿಯಿಂದ ನನ್ನ ಮಾರ್ಗದಲ್ಲಿ ಯಾರು ಖರ್ಚು ಮಾಡುತ್ತಾರೋ ಯೆಂದು ಹೇಳುವುದಾಗಿದೆ.

ಆದರೇ ಮನುಷ್ಯರು ಈ ಮಾತನ್ನು ಸಹ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆಂದು ತಿಳಿಯುತ್ತಿದೆ. ಈ ವಿಷಯವನ್ನು ಸಹ ಪೂರ್ತಿ ಬಾಹ್ಯವಾಗಿ ಅರ್ಥ ಮಾಡಿಕೊಂಡಿದ್ದಾರೆ. ಇದು ಪೂರ್ತಿ ಅಂತರಾರ್ಥವಿರುವ ವಾಕ್ಯವೆಂದು ಗ್ರಹಿಸಲಾರದೆ ಹೋಗಿದ್ದಾರೆ. ಬಹಳ ಜನ ಮುಸ್ಲಿಮ್ ಸಹೋದರರು ತಪ್ಪಾಗಿ ಅರ್ಥಮಾಡಿಕೊಂಡು ದೇವರು ಹೇಳಿದಂತೆ ಪ್ರವರ್ತಿಸದೇ ಅದಕ್ಕೆ ಅನ್ಯವಾಗಿ ಪ್ರವರ್ತಿಸುತ್ತಿದ್ದಾರೆ. ದೇವರು ಮನುಷ್ಯನಿಗೆ ಪ್ರಸಾದಿಸುವುದು ಧನವೆಂದು ತಿಳಿದು, ಮನುಷ್ಯನಿಗೆ ಇರುವ ಧನದಲ್ಲಿ ಬಡವರಿಗೆ ಸ್ವಲ್ಪ ದಾನ ಮಾಡಬೇಕೆಂಬ ಉದ್ದೇಶದಿಂದ ತಮ್ಮ ಬಳಿ ಇರುವ ಧನ ದೇವರು ಕೊಟ್ಟಿರುವುದೆಂದುಕೊಂಡು ಸ್ವಲ್ಪ ಧನವನ್ನು ಬಡವರಿಗೆ ಅದೇ ಕೆಲಸವಾಗಿ ದಾನ ಮಾಡುತ್ತಿರುವರು. ಈ ವಿಷಯದಲ್ಲಿ ಜ್ಞಾನದ ಪ್ರಕಾರ ನೋಡಿದರೇ ಧನ ಮನುಷ್ಯ ಮಾಡಿಕೊಂಡ ಕರ್ಮದಿಂದ ಉಂಟಾಗುತ್ತಿದೆ. ಯಾರು ಧನವಂತನಾದರೂ, ಯಾರು ಬಡವನಾದರೂ ಅದು ಅವನ ಕರ್ಮವನ್ನನುಸರಿಸಿ ನಡೆದಿರುತ್ತದೆ. ಬಡವ, ಧನಿಕ ಎನ್ನುವುದು ಕರ್ಮವನ್ನನುಸರಿಸಿ ಇರುವಾಗ ಧನವನ್ನು ದೇವರು ಕೊಡುವವನಲ್ಲ. ದೇವರು ಪ್ರಪಂಚ ಧನವನ್ನು ಕೊಡುವುದಿಲ್ಲ. ದೇವರು ಕೊಡುವುದು ಜ್ಞಾನಧನ. ದೇವರು ಜ್ಞಾನವನ್ನು ಪ್ರಸಾದಿಸುವನು. ಮನುಷ್ಯನಿಗೆ ಧನ ಕರ್ಮದಿಂದ ಉಂಟಾದಂತೆ ದೈವಜ್ಞಾನ ಎನ್ನುವ ಜ್ಞಾನಧನ ದೇವರು ಕೊಟ್ಟರೇ ಮನುಷ್ಯನಿಗೆ ಲಭಿಸುತ್ತದೆ. ಕರ್ಮ ಪ್ರಸಾದಿಸುವುದು ಪ್ರಪಂಚ ಧನವಾದಾಗ, ದೇವರು ಪ್ರಸಾದಿಸುವುದು ದೇವರ ಜ್ಞಾನ. ಮನುಷ್ಯನಿಗಿರುವ ಶ್ರದ್ಧೆಯನ್ನನುಸರಿಸಿ ದೇವರು ಜ್ಞಾನವನ್ನು ಪ್ರಸಾದಿಸಿದಾಗ ಮನುಷ್ಯ ಜ್ಞಾನವಂತನಾದಾಗ, **ದೇವರು ಪ್ರಸಾದಿಸಿದ ಜ್ಞಾನವನ್ನು ಜ್ಞಾನ ಇಲ್ಲದವರಿಗೆ ಹಂಚುವುದು ಜ್ಞಾನಿವೊಂದರ ಕರ್ತವ್ಯ.** ಯಾರಾದರೇ ದೇವರು ಕೊಟ್ಟಿರುವ ಜ್ಞಾನವನ್ನು ದೇವರು ಹೇಳಿದಂತೆ ದೇವರ ಮಾರ್ಗದಲ್ಲಿಯೇ ಜ್ಞಾನವಿಲ್ಲದ

ಪ್ರಜೆಗಳಿಗೆ ಜ್ಞಾನವನ್ನು ದೇವರು ಹೇಳಿದಂತೆ ದೇವರ ಮಾರ್ಗದಲ್ಲಿಯೇ ಜ್ಞಾನವಿಲ್ಲದ ಪ್ರಜೆಗಳಿಗೆ ಜ್ಞಾನವನ್ನು ದೇವರು ಹೇಳಿದಂತೆ ದೇವರ ಮಾರ್ಗದಲ್ಲಿಯೇ ಜ್ಞಾನವಿಲ್ಲದ ಪ್ರಜೆಗಳಿಗೆ ಜ್ಞಾನವನ್ನು ತಿಳಿಸಿದರೇ ನಿಜವಾಗಿ ಅವನು ದೇವರ ಸೇವೆ ಮಾಡಿದಂತಾಗುತ್ತದೆ.

ದೇವರ ಮಾರ್ಗದ ಪ್ರಕಾರ ದೇವರ ಜ್ಞಾನವನ್ನು ತಿಳಿದುಕೊಂಡು, ತಾನು ತಿಳಿದ ಜ್ಞಾನವನ್ನು ಇತರರಿಗೆ ತಿಳಿಸುವ ಕೆಲಸವನ್ನು ಯಾವನು ಮಾಡುತ್ತಾನೋ ಅವನು ನಿಜಕ್ಕೂ ದೇವರ ಸೇವೆ ಮಾಡಿದವನಾಗುತ್ತಾನೆ. ಆದ್ದರಿಂದ ವಾಕ್ಯದಲ್ಲಿ ಯಾರಾದರೇ ದೇವರು ಪ್ರಸಾದಿಸಿದ ಜ್ಞಾನವನ್ನು ದೇವರ ಮಾರ್ಗದಲ್ಲಿ ಖರ್ಚು ಮಾಡುತ್ತಾನೋ ಅವನು ದೇವರ ಮಾರ್ಗದಲ್ಲಿ ಇದ್ದಂತೇ ಎಂದು ಹೇಳುವುದಾಗಿದೆ. ಈ ವಾಕ್ಯ ಸರಿಯಾಗಿ ಅರ್ಥಮಾಡಿಕೊಳ್ಳದ ಬಹಳ ಜನರು ಗುಡಿಗಳ ಹತ್ತಿರ, ದರ್ಗಾಗಳ ಮುಂದೆ ಕುಳಿತುಕೊಂಡು ಭಿಕ್ಷೆ ಬೇಡಿಕೊಳ್ಳುವವರಿಗೆ ಹಣವನ್ನು ದಾನ ಮಾಡುತ್ತಾ ದೇವರು ಕೊಟ್ಟಿರುವ ಧನವನ್ನು ದೇವರು ಹೇಳಿದಂತೆ ಬಡವರಿಗೆ ದಾನ ಮಾಡುತ್ತಿದ್ದೇವೆಂದು ಹೇಳಿಕೊಳ್ಳುತ್ತಾ ತೃಪ್ತಿ ಹೊಂದುತ್ತಿದ್ದಾರೆ. ಹಾಗೆ ತೃಪ್ತಿ ಹೊಂದುವುದು ತಿಳಿಯದ ತನವೇ ಎಂದು, ಹಾಗೆ ಮಾಡುವುದು ಅಜ್ಞಾನವೇಯೆಂದು ತಿಳಿದುಹೋಗುತ್ತಿದೆ. ಆದ್ದರಿಂದ ದೇವರು ಹೇಳಿದ ವಾಕ್ಯಗಳ ಜ್ಞಾನವನ್ನು ಸಕ್ರಮವಾಗಿ ಅರ್ಥ ಮಾಡಿಕೊಳ್ಳಬೇ ಕೆಂದು ಇಲ್ಲದೇ ಹೋದರೇ ದೇವರ ಮಾರ್ಗದಿಂದ ತಪ್ಪಿಹೋಗಿ ಮಾಯ ಮಾರ್ಗದಲ್ಲಿ ಪ್ರಯಾಣಿಸಿದಂತಾಗುತ್ತದೆಂದು ಅರ್ಥವಾಗುತ್ತಿದೆ. ಇನ್ನು ಮೂರನೆ ವಾಕ್ಯದಲ್ಲಿ ಅಂದರೆ ಸೂರಾ ಎರಡು ನಾಲ್ಕನೆ ಆಯತ್‌ನಲ್ಲಿ ಈ ವಿಧವಾಗಿ ಹೇಳಿದ್ದಾರೆ.

(2-4) **"ಓ ಪ್ರವಕ್ತಾ! ಯಾರಾದರೇ ನಿನ್ನಮೇಲೆ ಅವತರಿಸುವಂತೆ ಮಾಡಲ್ಪಟ್ಟಿರುವುದನ್ನು (ಈ ಖುರಾನ್ ಗ್ರಂಥವನ್ನು) ಮತ್ತು ನಿನಗೆ ಪೂರ್ವದಲ್ಲಿ ಅವರಿಸಲ್ಪಟ್ಟ ದಿವ್ಯ ಗ್ರಂಥಗಳನ್ನು (ಭಗವದ್ಗೀತೆ, ಬೈಬಲ್ ಅಥವಾ ತೌರಾತ್, ಇಂಜೀಲ್‌ಗಳನ್ನು) ವಿಶ್ವಾಸಿಸುತ್ತಾರೋ ಮತ್ತು ಪರಲೋಕ ಜೀವನವನ್ನು ದೃಢವಾಗಿ**

**ನಂಬುತ್ತಾರೋ"** ಎಂದು ಹೇಳಲಾಗಿದೆ. ಈ ವಾಕ್ಯದಲ್ಲಿ ಒಂದು ಖುರಾನ್ ಗ್ರಂಥವೇ ಅಲ್ಲದೆ, ಅದಕ್ಕಿಂತ ಮೊದಲು ಬಂದಿರುವ ತೌರಾತ್, ಇಂಜೀಲ್ (ಭಗವದ್ಗೀತೆ, ಬೈಬಲ್) ಗ್ರಂಥಗಳನ್ನು ಸಹ ಯಾರಾದರೇ ದೈವ ಗ್ರಂಥಗಳಾಗಿ ವಿಶ್ವಾಸಿಸುತ್ತಾರೋಯೆಂದು, ಅವನು ದೇವರ ಮಾರ್ಗದಲ್ಲಿ ಇದ್ದಂತೇಯೆಂದು ಹೇಳುತ್ತಿದ್ದಾರೆ. ಅದರ ಪ್ರಕಾರ ಈದಿನ ತನ್ನ ಮತ ಗ್ರಂಥದ ಹಾಗೆ ಇತರ ಮತ ಗ್ರಂಥಗಳನ್ನು ಸಹ ದೊಡ್ಡದಾಗಿ ಯಾವನು ನೋಡುತ್ತಾನೋ ಅವನು ಜ್ಞಾನಿ ಆಗಬಲ್ಲನೆಂದು ಅರ್ಥವಾಗುತ್ತಿದೆ. ಆದರೇ ಈ ದಿನ ಮತ ಎನ್ನುವುದು ಮನುಷ್ಯರ ಮೆದುಳಿನಲ್ಲಿ ಆಳವಾಗಿ ಹುದುಗಿಕೊಂಡು ಹೋಗಿದೆ. ಇದು ಅದು ಎಂದು ಹೇಳುವುದಕ್ಕೆ ಅವಕಾಶವಿಲ್ಲದಂತೆ ಎಲ್ಲ ಮತಗಳಲ್ಲಿ ಇತರ ಮತಗಳ ಮೇಲೆ ದ್ವೇಷ ಪೂರ್ತಿಯಾಗಿ ಇದೆ. ಹಾಗಿರುವಾಗ ಬೇರೆಬೇರೆ ಮತ ಗ್ರಂಥಗಳಾಗಿ ಮೂರು ಗ್ರಂಥಗಳಿಗೆ ಹೆಸರುಗಳನ್ನಿಟ್ಟು, ಭಗವದ್ಗೀತೆ ಹಿಂದೂಗಳದೆಂದು, ಬೈಬಲ್ ಕ್ರೈಸ್ತರದೆಂದು, ಖುರಾನ್ ಮುಸ್ಲಿಮ್‌ರದೆಂದು ಪ್ರಚಾರ ಮಾಡಿ ಕೊಂಡಿದ್ದಾರೆ. ಆಯಾ ಗ್ರಂಥಗಳಲ್ಲಿ ಮತಗಳ ಪ್ರಸ್ತಾಪ ಯಾವಮಾತ್ರವೂ ಇಲ್ಲದಿದ್ದರೂ ಪ್ರಜೆಗಳೇ ಗ್ರಂಥಗಳಿಗೆ ಮತಗಳನ್ನು ಅಂಟಿಸಿ ಒಂದೊಂದು ಮತಕ್ಕೆ ಒಂದೊಂದು ಗ್ರಂಥವೆಂದು ಹೇಳುತ್ತಿದ್ದಾರೆ.

ಗ್ರಂಥಗಳಲ್ಲಿ ದೈವಜ್ಞಾನವಿದ್ದರೂ, ಯಾವ ಗ್ರಂಥವಾದರೂ ಸರ್ವ ಮಾನವರಿಗೂ ಎನ್ನುವ ಉದ್ದೇಶದಲ್ಲಿ ಅದೇ ಮಾತನ್ನು ಹೇಳಿ ಬರೆದಿದ್ದರೂ ಮನುಷ್ಯರು ಮಾತ್ರ ಮೂರು ಗ್ರಂಥಗಳನ್ನು ಮೂರು ಮತದವರವೆಂದು ಹೇಳುತ್ತಾ ಒಂದೊಂದು ಮತದವರು ಒಂದೊಂದು ಗ್ರಂಥವನ್ನು 'ಇದು ನಮ್ಮ ಗ್ರಂಥ' ಎಂದು ಅನ್ನುತ್ತಿದ್ದಾರೆ. ಒಂದು ಒಂದು ಮತಕ್ಕೆ ಸಂಬಂಧಿಸಿದ ಗ್ರಂಥವಾದಾಗ ಉಳಿದ ಎರಡು ಗ್ರಂಥಗಳು ಉಳಿದ ಎರಡು ಮತದವರಿಗೆ ಸಂಬಂಧಿಸಿರುವವಾಗಿ ಹೇಳುತ್ತಿದ್ದಾರೆ. ಹಿಂದೂಗಳು ಕ್ರೈಸ್ತರೆಂದರೂ, ಬೈಬಲ್ ಗ್ರಂಥವೆಂದರೂ ಪೂರ್ತಿಯಾಗಿ ಅಸಹ್ಯಿಸಿಕೊಳ್ಳುತ್ತಿರುವರು. ಹಾಗೆಯೇ ಮುಸ್ಲೀಮ್‌ರು ಕ್ರೈಸ್ತವರನ್ನು ಅವರ ಗ್ರಂಥವನ್ನು ನೋಡಿ ಪರಮತ ಸಂಬಂಧವೆಂದು ಅಸೂಯೆ ಭಾವನೆ

ಹೊಂದಿರುತ್ತಾರೆ. ಹೀಗೆ ಪ್ರತಿ ಮತದಲ್ಲಿಯೂ ಪರಮತದ ಮೇಲೆ ಅಸೂಯೆ ಶೇ. 90ರಷ್ಟು ಇರುವುದರಿಂದ ಅವರಿಗಿಂತ ನಾವೇ ದೊಡ್ಡವರೆಂದೂ, ಅವರ ಗ್ರಂಥಗಳಿಗಿಂತ ನಮ್ಮ ಗ್ರಂಥವೇ ದೊಡ್ಡದೆನ್ನುವ ಭಾವನೆ ಎಲ್ಲ ಮತಗಳಲ್ಲಿ ಇದೆ. ಅಂತಹ ಸಂದರ್ಭದಲ್ಲಿ ಮುಸ್ಲಿಮ್‌ರು ಅಂತಿಮ ಗ್ರಂಥವಾದ ಖುರಾನ್ ಗ್ರಂಥವೇ ಉಳಿದ ಎರಡು ಗ್ರಂಥಗಳಿಗಿಂತ ದೊಡ್ಡದೆನ್ನುವ ಭಾವನೆ ಹೊಂದಿರುವುದರಿಂದ ಅದೇ ಖುರಾನ್ ಗ್ರಂಥದಲ್ಲಿ ಖುರಾನ್ ಗ್ರಂಥಕ್ಕಿಂತ ಮೊದಲು ಬಂದಿರುವ ಭಗವದ್ಗೀತೆ, ಬೈಬಲ್ ಎನ್ನುವ ಎರಡು ಗ್ರಂಥಗಳನ್ನು ಯಾರಾದರೇ ವಿಶ್ವಾಸಿಸುತ್ತಾನೋ, ಅವನು ದೇವರ ಮಾರ್ಗದಲ್ಲಿ ಇದ್ದಂತೇ ಇಲ್ಲದೆ ಹೋದರೇ ಅವನು ಮಾಯೆ ಮಾರ್ಗದಲ್ಲಿ ಇದ್ದಂತೇಯೆಂದು ಹೇಳಿದ್ದಾನೆ. ತಮ್ಮ ಗ್ರಂಥದಲ್ಲಿ ಈ ಮಾತನ್ನು ಹೇಳಿದ್ದರೂ, ದೇವರ ಮಾತನ್ನು ಗುರುತಿಸದೆ ತಮ್ಮ ಗ್ರಂಥವೇ ದೊಡ್ಡದೆಂದು ಹೇಳಿಕೊಳ್ಳುವ ಮುಸ್ಲಿಮ್‌ರು ದೇವರ ಮಾತನ್ನು ಧಿಕ್ಕರಿಸಿದಂತಾಗುತ್ತದೆ.

ಗತ ಕಾಲದಲ್ಲಿ ಬಂದಿರುವ ಗ್ರಂಥಗಳಿಗಿಂತ ಕೊನೆಯದಾಗಿ ಬಂದಿರುವ ಖುರಾನ್ ಗ್ರಂಥದಲ್ಲಿ ಹಳೆ ಜ್ಞಾನವನ್ನು ಬಿಟ್ಟು ಹೊಸ ಜ್ಞಾನ ಹೇಳಿದ್ದಾರೆ. ಹಳೆ ಗ್ರಂಥಗಳ ಜ್ಞಾನಕ್ಕಿಂತ ನವೀನವಾಗಿ ಬಂದಿರುವ ಜ್ಞಾನ ಈದಿನ ಮನುಷ್ಯರಿಗೆ ಎಷ್ಟೋ ಅವಶ್ಯವೆಂದು ಕೆಲವರು ಮುಸ್ಲಿಮ್‌ರು ಹೇಳುವುದನ್ನು ನಾನು ಸ್ವತಃವಾಗಿ ಕೇಳಿಸಿಕೊಂಡಿದ್ದೇನೆ. ಅವರ ಮಾತುಗಳನ್ನು ಕೇಳಿ ಖುರಾನ್ ಗ್ರಂಥವನ್ನು ನೋಡಿದರೇ ಖುರಾನ್ ಗ್ರಂಥದಲ್ಲಿ ಎಲ್ಲ ಗ್ರಂಥಗಳನ್ನು ಗೌರವವಾಗಿ ನೋಡಬೇಕೆಂದು, ಎಲ್ಲ ಗ್ರಂಥಗಳಲ್ಲಿ ಒಂದೇ ದೇವರ ಜ್ಞಾನವಿದೆಯೆಂದು ತಿಳಿದಿದೆ. ಅಷ್ಟೇ ಅಲ್ಲದೆ ಸ್ವತಃವಾಗಿ ಖುರಾನ್ ಗ್ರಂಥವೇ ಉಳಿದ ಎರಡು ಗ್ರಂಥಗಳಲ್ಲಿ ಜ್ಞಾನ ಜ್ಯೋತಿ ಇದೆಯೆಂದೂ, ಮಾರ್ಗದರ್ಶಕ ಎರಡು ಗ್ರಂಥಗಳಲ್ಲಿ ಇದೆಯೆಂದು ಹೇಳುವುದು ನಡೆದಿದೆ. ಅಷ್ಟೇ ಅಲ್ಲದೆ ಖುರಾನ್ ಗ್ರಂಥದಲ್ಲಿ ಸೂರಾ ಐದು, ಆಯತ್ 68ರಲ್ಲಿ ಹೀಗೆ ಹೇಳಿದ್ದಾರೆ. **(5-68) "ನೀವು ತೌರಾತ್‌ನ್ನು ಇಂಜೀಲ್ (ಭಗವದ್ಗೀತೆ, ಬೈಬಲ್) ಗ್ರಂಥಗಳನ್ನು, ನಿಮ್ಮ ಪ್ರಭು**

**ಕಡೆಯಿಂದ ನಿಮ್ಮ ಹತ್ತಿರಕ್ಕೆ ಕಳಿಸಿರುವ ಖುರಾನ್ ಗ್ರಂಥವನ್ನು ನಿಮ್ಮ ಜೀವನಗಳಲ್ಲಿ ಸಂಸ್ಥಾಪಿಸುವ ತನಕ ನೀವು ಯಾವ ಧರ್ಮದಲ್ಲಿಯೂ ಇಲ್ಲದಂತೇ"** ಎಂದು ಹೇಳಿದ್ದಾರೆ. ಖುರಾನ್‌ನಲ್ಲೇ ಅನೇಕ ಕಡೆ ಮೂರು ಗ್ರಂಥಗಳನ್ನು ಸಮಾನವಾಗಿ ನೋಡಬೇ ಕೆಂದು ಹೇಳಿದ್ದಾರೆ. ಮೇಲಿನ ವಾಕ್ಯವನ್ನು ನೋಡಿದರೂ ದೇವರು ಹೇಳಿದ ಮೂರು ಗ್ರಂಥಗಳು ಒಂದೇಯೆಂದು ಯಾವುದನ್ನೂ ಅಸೂಯೆಯಿಂದ ನೋಡಬಾರದೆಂದು ತಿಳಿಯುತ್ತಿದೆ. ಹೀಗೆ ಅಸೂಯೆಯಿಂದ ನೋಡಿದವನಾಗಲೀ, ಅಸೂಯೆಯಿಂದ ಮಾತನಾಡಿದವನಾಗಲೀ ದೇವರ ಮಾರ್ಗದಲ್ಲಿ ಇಲ್ಲದಂತೇ ಯೆಂದು, ಮಾಯೆ ಮಾರ್ಗದಲ್ಲಿ ಇದ್ದಂತೇಯೆಂದು ಹೇಳಬಹುದು.

ಅಂತಿಮ ಗ್ರಂಥದಲ್ಲಿನ ಮೂರು ಪ್ರಥಮ ವಾಕ್ಯಗಳಲ್ಲಿ ಮೊದಲ ವಾಕ್ಯ ಒಂದು ಭಾಗವಾಗಿದ್ದೂ, ಖುರಾನ್ ಗ್ರಂಥವನ್ನು ಕುರಿತು ಮಾತ್ರ ತಿಳಿಸಿರುವಾಗ, ಎರಡನೆ ವಾಕ್ಯ ಮೂರು ಭಾಗಗಳಾಗಿದ್ದು, ಒಂದು ಭಾಗದಲ್ಲಿ ಅಗೋಚರವಾದ ಆತ್ಮಗಳನ್ನು ಕುರಿತು ಹೇಳಿರುವಾಗ, ಎರಡನೆ ಭಾಗದಲ್ಲಿ ನಮಾಜ್ ಸ್ಥಾಪನೆ ಕುರಿತು ಹೇಳುವುದಾಗಿದೆ. ಮೂರನೆ ಭಾಗದಲ್ಲಿ ದೇವರು ಕೊಟ್ಟಿರುವ ಜ್ಞಾನವನ್ನು ಇತರರಿಗೆ ಹಂಚಿರೆಂದು ಹೇಳಿದ್ದಾರೆ. ಮೂರನೆ ವಾಕ್ಯ ಎರಡು ಭಾಗಗಳಾಗಿದ್ದೂ ಒಂದು ಭಾಗದಲ್ಲಿ ಮೂರು ದೈವ ಗ್ರಂಥಗಳನ್ನು ಸಮಾನವಾಗಿ ನೋಡಿರೆಂದು ಹೇಳಿದ್ದಾರೆ. ಎರಡನೆ ಭಾಗದಲ್ಲಿ ಪರಲೋಕವನ್ನು ಕುರಿತು ಹೇಳಿದ್ದಾರೆ. ಈಗ ಕೊನೆಯದಾಗಿ ಪರಲೋಕವನ್ನು ಕುರಿತು ಏನು ಹೇಳಿದ್ದಾರೋ ಒಂದು ಸಲ ನೋಡೋಣ. ಪರಲೋಕವನ್ನು ಕುರಿತು ಪರಲೋಕ ಜೀವನವನ್ನು ಕುರಿತು ಯಾರು ವಿಶ್ವಾಸಿಸುತ್ತಾರೋ ಅವರು ದೇವರ ಮಾರ್ಗದಲ್ಲಿ ಇದ್ದಂತೇಯೆಂದು ಹೇಳುವುದಾಗಿದೆ. ಪರಲೋಕವನ್ನು ಕುರಿತು ಈಗ ವಿವರವಾಗಿ ಹೇಳಿಕೊಳ್ಳೋಣ.

ಲೋಕಗಳು ಮೂರು ಇವೆ. ಅವುಗಳನ್ನು ಬಿಡಿಬಿಡಿಯಾಗಿ ಹೇಳಿಕೊಂಡರೇ ಒಂದು ಸ್ವರ್ಗಲೋಕ, ಎರಡು ನರಕಲೋಕ, ಮೂರು ಪರಲೋಕ. ಲೋಕ ಎಂದರೇ ಅನುಭವಿಸುವ ಸ್ಥಳ. ಸುಖಗಳನ್ನು,

ಸಂತೋಷಗಳನ್ನು ಅನುಭವಿಸುವ ಸ್ಥಳ ಎಲ್ಲಿದೆಯೋ ಅಲ್ಲಿಯೇ ಸ್ವರ್ಗಲೋಕವಿದೆ. ದುಃಖ, ಕಷ್ಟಗಳು ಅನುಭವಿಸುವ ಸ್ಥಳ ಎಲ್ಲಿದೆಯೋ ಅಲ್ಲಿಯೇ ನರಕ ಲೋಕವಿದ್ದಂತೆ ಹೇಳಬಹುದು. ಎರಡು ಲೋಕಗಳ ನಂತರ ಮೂರನೆ ಲೋಕ ಇದೆ. ಎರಡು ಲೋಕಗಳಿಗಿಂತ ಬೇರೆಯಾಗಿ, ಭಿನ್ನವಾಗಿ ಇರುವುದರಿಂದ ಅದನ್ನು ಪರಲೋಕ ಎಂದು ಕರೆದಿದ್ದೇವೆ. ಸುಖದುಃಖಗಳಿಗೆ, ಕಷ್ಟ ಸಂತೋಷಗಳಿಗೆ ಸಂಬಂಧ ಇಲ್ಲದ್ದಾಗಿ, ಪ್ರಕೃತಿಗೆ ಸಂಬಂಧವಿಲ್ಲದ್ದಾಗಿ ದೈವತ್ವಕ್ಕೆ ಸಂಬಂಧಿಸಿರುವುದಾಗಿರುವುದು ಪರಲೋಕ. ಲೋಕ ಎಂದರೇ ಅನುಭವಿಸುವ ಸ್ಥಳ ಎಂದಿದ್ದೀರಲ್ಲವೆ! ಸ್ವರ್ಗಲೋಕದಲ್ಲಿ ಸುಖ, ನರಕಲೋಕದಲ್ಲಿ ದುಃಖ ಅನುಭವಿಸುತ್ತಿರುತ್ತಾರಲ್ಲವೆ! ಅದೇ ವಿಧವಾಗಿ ಪರಲೋಕದಲ್ಲಿ ಯಾವ ಅನುಭವ ಇದೆಯೆಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಉತ್ತರ ಈ ವಿಧವಾಗಿ ಇದೆ. ಆತ್ಮ, ಜೀವಾತ್ಮಗಳು ಅಲ್ಲದಿರುವುದು, ಆ ಎರಡು ಆತ್ಮಗಳಿಗಿಂತ ಬೇರೆಯಾಗಿರುವುದು ಪರಮಾತ್ಮ. ಹಾಗೆಯೇ ಸ್ವರ್ಗ ನರಕಗಳು ಅಲ್ಲದಿರುವುದು ಪರಲೋಕ. ಎರಡು ಆತ್ಮಗಳಿಗಿಂತ ಬೇರೆಯಾಗಿರುವ ಪರಮಾತ್ಮನನ್ನು ಎರಡು ಲೋಕಗಳಿಗಿಂತ ಬೇರೆಯಾಗಿರುವ ಪರಲೋಕದಲ್ಲಿ ಅನುಭವಿಸುವುದು ನಡೆಯುತ್ತಿದೆ. ಪರಮಾತ್ಮನನ್ನು ಅನುಭವಿಸುವುದು ಎಂದರೇ ದೇವರಲ್ಲಿ ಸೇರಿರುವುದು ಎಂದೂ, ಅಥವಾ ದೇವರಾಗಿ ಇರುವುದೆಂದೂ ಅನೇಕ ವಿಧಗಳಾಗಿ ಹೇಳಬಹುದು. ಅದನ್ನು ಮೋಕ್ಷ, ಮುಕ್ತಿ ಎಂದು ಸಹ ಅನ್ನುತ್ತಾರೆ.

ಸ್ವರ್ಗ, ನರಕ ಲೋಕಗಳು ಎರಡೂ ಇಹ ಲೋಕದಲ್ಲಿಯೇ ಅಂದರೆ ಭೂಮಿ ಮೇಲೆಯೇ ಇವೆ. ಅವು ಎಲ್ಲೋ ಇವೆಯೆಂದು ಅಂದುಕೊಳ್ಳುವುದು ತಪ್ಪು ಇದೇ ಭೂಮಿ ಮೇಲೆಯೇ ಮನುಷ್ಯ ಸ್ವರ್ಗ ಸುಖಗಳನ್ನು, ನರಕ ಕಷ್ಟಗಳನ್ನು ದುಃಖಗಳನ್ನು ಅನುಭವಿಸುತ್ತಿದ್ದಾನೆ. ಅದೇ ವಿಧವಾಗಿ ಪರಲೋಕವನ್ನು ಹೊಂದಿ ದೇವರನ್ನು ಅನುಭವಿಸುವವನು ಸಹ ಇದೇ ವಿಶ್ವದಲ್ಲೇ ಅನುಭವಿಸುತ್ತಿದ್ದಾನೆ. ದೇವರು ವಿಶ್ವವೆಲ್ಲಾ ವ್ಯಾಪಿಸಿದ್ದಾನೆ, ಆದ್ದರಿಂದ ಮನುಷ್ಯ ಮೋಕ್ಷ ಹೊಂದಿದರೇ ಪರಲೋಕವನ್ನು ಹೊಂದಿ ಅಣುಅಣುವಿನಲ್ಲೂ ವ್ಯಾಪಿಸಿ

ದೇವರಲ್ಲಿ ಬೆರೆತಿದ್ದಾನೆ. ದೇವರಲ್ಲಿ ಅನುಭವಿಸುವುದು ಏನೂ ಇರುವುದಿಲ್ಲ. ಜೀವಿಯು ದೇವರಿಗಿಂತ ಬೇರೆಯಾಗಿದ್ದರೇ ಅನುಭವಿಸುವುದು ಇರುತ್ತದೆ. ಜೀವಿಯೇ ದೇವರಲ್ಲಿ ಸೇರಿ ದೇವರಾಗಿರುವುದರಿಂದ ಅವನು ಪ್ರತ್ಯೇಕವಾಗಿ ಸ್ವರ್ಗನರಕಗಳ ಹಾಗೆ ಅನುಭವಿಸುವುದಕ್ಕೆ ಅಲ್ಲಿ ಏನೂ ಇರುವುದಿಲ್ಲ. ಏನಾದರೂ ಅನುಭವಿಸುವುದಕ್ಕೆ ಜೀವಿಯು ಅಲ್ಲಿ ಇರುವುದಿಲ್ಲ. ದೇವರ ಹತ್ತಿರಕ್ಕೆ ಸೇರಿದ ಜೀವಿಯು ದೇವರಾಗಿ ಹೋಗುತ್ತಿದ್ದಾನೆ. ಎಷ್ಟು ಜನ ಸೇರಿದರೂ ಅಷ್ಟು ಜನ ಒಂದೇ ದೇವರಾಗಿ ಬದಲಾಗಿ ಹೋಗುತ್ತಿದ್ದಾರೆ. ಜೀವಿಯು(ಜೀವಾತ್ಮ) ಯಾರೂ ದೇವರಲ್ಲಿ ಬೇರೆಯಾಗಿ ಇಲ್ಲ, ಆದ್ದರಿಂದ ಅನುಭವಿಸುವುದು ಏನೂ ಇಲ್ಲ.

ಒಬ್ಬ ಜೀವಿಯು ಜನ್ಮ ಹೊಂದಿ ಶರೀರವನ್ನು ಧರಿಸಿರುವವರೆಗು ಅವನಿಗೆ ಕರ್ಮ ಇರುತ್ತದೆ. ಕರ್ಮ ಎರಡು ವಿಧಗಳು. ಪಾಪ ಮತ್ತು ಪುಣ್ಯ ಎನ್ನುವ ಎರಡು ವಿಧಗಳ ಕರ್ಮದಿಂದ ಮನುಷ್ಯ (ಜೀವಾತ್ಮ) ಜೀವನ ಕಳೆಯುತ್ತಿರುತ್ತದೆ. ಮನುಷ್ಯನ ಜೀವನದಲ್ಲಿ ಕರ್ಮವನ್ನು ಅನುಭವಿಸುವುದೇ ಜೀವನವಾಗಿ ಮುಖ್ಯವಾದ ವೃತ್ತಿಯಾಗಿರುತ್ತದೆ. ಹಾಗೆ ಅನುಭವಿಸುವುದನ್ನೇ ಪಾಪಪುಣ್ಯಗಳನ್ನು ಅನುಭವಿಸುವಂತೆ ಅಥವಾ ಸ್ವರ್ಗ ಸುಖಗಳನ್ನು ನರಕ ಯಾತನೆಗಳನ್ನು ಅನುಭವಿಸಿದಂತೆಂದು ಹೇಳಬಹುದು. ಮನುಷ್ಯನ ಜೀವನದಲ್ಲಿ ಸುಖದುಃಖಗಳನ್ನು ಹೊರತುಪಡಿಸಿ ಇತರೆ ಏನೂ ಅನುಭವಿಸಲಿಲ್ಲ. ಅಜ್ಞಾನಿಗಳಾದ ಜೀವಿಗಳಿಗೆ ಜೀವನವೆಲ್ಲಾ ಸುಖದುಃಖಗಳಿಂದ ತುಂಬಿರುತ್ತದೆ. ಮನುಷ್ಯರಲ್ಲಿ ಜ್ಞಾನಿಗಳಾದವರಿಗೆ ಸ್ವಲ್ಪ ವ್ಯತ್ಯಾಸ ಇದೆ. ಜ್ಞಾನವಿಲ್ಲದ ಮನುಷ್ಯ ಹೆಚ್ಚಿನ ಸುಖ ಅನುಭವಿಸಿದಾಗಾಗಲೀ, ಹೆಚ್ಚಿನ ದುಃಖ ಅನುಭವಿಸಿದಾಗಾಗಲೀ ಒಂದು ಹದ್ದನ್ನು ದಾಟಿದ ಸಂತೋಷ ಎಂದೂ, ಹದ್ದು ಮೀರಿದ ದುಃಖ ಎಂದೂ ಹೇಳಬಹುದು. ಹದ್ದು ದಾಟಿ ಎಂದರೆ ಒಂದು ಪರಿಮಿತಿ ದಾಟಿ ದುಃಖವನ್ನು ಅನುಭವಿಸಿದಾಗ ಕಣ್ಣಿನಲ್ಲಿ ನೀರು ಬರುತ್ತದೆ. ಹಾಗೆಯೇ ಒಂದು ಪರಿಮಿತಿ ದಾಟಿ ಸಂತೋಷವನ್ನು ಅನುಭವಿಸಿದಾಗ ಸಹ ಕಣ್ಣಿನಲ್ಲಿ ನೀರು

ಬರುತ್ತದೆ. ಇದು ಎಲ್ಲವೂ ಸ್ವರ್ಗ ನರಕಗಳಲ್ಲಿ ಇರುವ ವಿಧಾನವೇಯೆಂದು ಹೇಳಬಹುದು.

ಮನುಷ್ಯರು ಹೆಚ್ಚಾಗಿ ದುಃಖವನ್ನೇ ಹೊಂದುತ್ತಿರುತ್ತಾರೆ. ಆದ್ದರಿಂದ ಅವರಿಗೆ ಅಳು ಬಂದು ಕಣ್ಣೀರು ಬರುತ್ತದೆ. ಮನುಷ್ಯ ಹೆಚ್ಚಾಗಿ ಪರಿಮಿತಿ ದಾಟಿದ ಸುಖವನ್ನು ಅನುಭವಿಸಿದರೇ ಕಣ್ಣಿನಲ್ಲಿ ನೀರು ಬರುತ್ತವೆ. ಆದರೇ ಮನುಷ್ಯ ಅಜ್ಞಾನ ಜೀವನದಲ್ಲಿ ಸಂತೋಷದಿಂದ ಕಣ್ಣಿನಲ್ಲಿ ನೀರು ಬರುವುದು ಬಹಳ ಕಡಿಮೆ. ಅಂತಹ ಸಂಘಟನೆ ಅಪರೂಪವಾಗಿ ನಡೆಯುತ್ತಿರುತ್ತದೆ. ಇದನ್ನನುಸರಿಸಿ ಮನುಷ್ಯನಿಗೆ ಪಾಪವೇ ಹೆಚ್ಚಾಗಿ ಇದೆ. ಸ್ಥಾಯಿಯನ್ನು ಮೀರಿದ ಪುಣ್ಯ ಇಲ್ಲವೆಂದು ತಿಳಿಯುತ್ತಿದೆ. ಸ್ಥಾಯಿಯನ್ನು ಮೀರಿದ ಪಾಪ ಇರುವುದರಿಂದ ಸ್ಥಾಯಿಯನ್ನು ಮೀರಿದ ದುಃಖದಿಂದ ಅಳು ಬಂದು ಕಣ್ಣೀರು ಬರುತ್ತಿವೆ. ಇದನ್ನನುಸರಿಸಿ ಮನುಷ್ಯನ ಜೀವನವೆಲ್ಲಾ ಸ್ಥಾಯಿಯನ್ನು ಮೀರಿದ ಪಾಪದಲ್ಲಿ ಇದೆ ಆದರೆ, ಪರಿಮಿತಿಯನ್ನು ಮೀರಿದ ಪುಣ್ಯದಲ್ಲಿ ಇಲ್ಲವೆಂದು ತಿಳಿಯುತ್ತಿದೆ. ಇದೆಲ್ಲವೂ ಸಾಧಾರಣ ಮನುಷ್ಯನ ಜೀವನದಲ್ಲಿ, ಯಾವ ಮಾತ್ರ ಜ್ಞಾನ ತಿಳಿಯದ ಮನುಷ್ಯನ ಜೀವನದಲ್ಲಿ ನಡೆಯುತ್ತಿದೆ. ಅದೇ ಮನುಷ್ಯ ಸ್ವಲ್ಪ ಆತ್ಮಜ್ಞಾನ ತಿಳಿದಿದ್ದರೇ ಸುಖ ದುಃಖಗಳನ್ನು ಅನುಭವಿಸುವಾಗ ಕಣ್ಣೀರು ಬರುವಂತೆ ಜ್ಞಾನಿ ಆದವನು ಆತ್ಮಜ್ಞಾನವನ್ನು ಮಾತನಾಡುವಾಗಾಗಲೀ, ಆತ್ಮಜ್ಞಾನವನ್ನು ಕೇಳುವಾಗಾಗಲೀ, ಆತ್ಮ ಜ್ಞಾನವನ್ನು ಓದುವಾಗಾಗಲೀ ಅಮಿತವಾದ ಆನಂದವನ್ನು ಹೊಂದುತ್ತಿದ್ದಾನೆ. ಆದ್ದರಿಂದ ಆ ಸಮಯದಲ್ಲಿ ಆ ವ್ಯಕ್ತಿಗೆ ಕಣ್ಣಿನಲ್ಲಿ ನೀರು ಬರುತ್ತಿರುತ್ತದೆ. ಅದು ಸಾಧಾರಣ ಸಂತೋಷ ಅಲ್ಲ. ಸಾಧಾರಣ ದುಃಖ ಅಲ್ಲ. ಪ್ರಪಂಚ ಸಂಬಂಧ ಸುಖದುಃಖ ಇಲ್ಲದಿರುವಾಗ, ಮನುಷ್ಯ ಒಂದು ಪರಿಮಿತಿಯನ್ನು ಮೀರಿ ಆತ್ಮಾನಂದವನ್ನು ಹೊಂದುವಾಗ ಕಣ್ಣಿನಲ್ಲಿ ನೀರು ಬರುವುದು ನಡೆಯುತ್ತಿರುತ್ತದೆ. ಅಂತಹದ್ದೇ ಕೆಲವರಿಗೆ ಮತ್ತೊಂದು ಅನುಭವದಲ್ಲಿ ಸಹ ಬರುತ್ತದೆ. ಗತ ಜನ್ಮಗಳಲ್ಲಿ ನೂರು ಅಥವಾ ಎರಡುನೂರು ಅಥವಾ ಅದಕ್ಕಿಂತ ಹೆಚ್ಚಿನ ಜನ್ಮಗಳ ಕೆಳಗೆ ಆತ್ಮಜ್ಞಾನವನ್ನು

ಬೋಧಿಸಿದ ವ್ಯಕ್ತಿ ಪ್ರಸ್ತುತ ಜನ್ಮದಲ್ಲಿ ಕಾಣಿಸಿದಾಗ ಏನೂ ತಿಳಿಯದಂತೆಯೇ ಕಣ್ಣಿನಲ್ಲಿ ನೀರು ಬರುವುದು ನಡೆಯುತ್ತದೆ. ಆಗಲೂ ಸಹ ಅದು ಪ್ರಪಂಚ ಸುಖದುಃಖಗಳಿಂದ ಬರುತ್ತಿಲ್ಲ. ಇವೆಲ್ಲಾ ಕೆಲವರ ಜೀವನಗಳಲ್ಲಿ ನಡೆದಿರಬಹುದು, ನಡೆಯದೆ ಇರಬಹುದು. ಕೆಲವು ಸಂಘಟನೆಗಳ ಹಿಂದಿರುವ ರಹಸ್ಯವನ್ನು ತಿಳಿಸಿದ್ದೇವೆ. ಪ್ರಪಂಚ ಸುಖದುಃಖಗಳಿಗೆ ಸಂಬಂಧ ಇಲ್ಲದಂತೆ ಬರುವ ಕಣ್ಣೀರು ಆತ್ಮ ಸಂಬಂಧವಾದ ಸುಖಕ್ಕೆ ಸಂಬಂಧಿಸಿರುವುದೆಂದು ತಿಳಿಯಬೇಕು. ಮನುಷ್ಯ ಪ್ರಪಂಚದಲ್ಲಿ ಜೀವನ ಸಂಬಂಧ ಕರ್ಮಗಳನ್ನೇ ಅಲ್ಲದೆ ಜ್ಞಾನವನ್ನು ತಿಳಿದುಕೊಂಡರೇ, ಅಪರೂಪವಾಗಿ ಆತ್ಮಾನಂದವನ್ನು ಸಹ ಅನುಭವಿಸಬಹುದೆಂದು ತಿಳಿಯುತ್ತಿದೆ. ಪರಲೋಕ ಅನುಭವ ಆತ್ಮಾನಂದಕ್ಕಿಂತ ಮೀರಿರುವುದೆಂದು ಸೂಚನೆಯಾಗಿ ತಿಳಿಯುತ್ತಿದೆ.

# ಮುಕ್ತಾಯ

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ, ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ, ಅದು ಅಸತ್ಯವಲ್ಲ.**

# ಮೂರು ದೈವ ಗ್ರಂಥಗಳು
# ಮೂರು ಪ್ರಥಮ ವಾಕ್ಯಗಳು




– ಧರ್ಮಗಳು




– ಆತ್ಮಗಳು




– ಪ್ರಾರ್ಥನೆಗಳು

ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**www.thraithashakam.org**